# ಆಚಾರ್ಯ ಬಿ.ಎಂ.ಶ್ರೀ.



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

## ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ ಪ್ರಕಟನಮಾಲೆ

1. **ಶ್ರೀವಾಣಿ** (ಸೂಕ್ತಿಗಳ ಸಂಗ್ರಹ)
2. **ಆಚಾರ್ಯ ಬಿ. ಎಂ. ಶ್ರೀ.** (ಜೀವನ ಪರಿಚಯ)
3. **ಕನ್ನಡದ ಕಣ್ವ ಬಿ. ಎಂ. ಶ್ರೀ.** (ಮಕ್ಕಳಿಗೆ)
4. **ಶ್ರೀನಿಧಿ** (ಸಂಸ್ಮರಣ ಸಂಪುಟ)
5. **ಶ್ರೀಗಂಧ** (ಸಂಸ್ಮರಣ ಸಂಚಿಕೆ)
6. **ಗದಾಯುದ್ಧ ನಾಟಕ** (ಸರಳ ನಾಟಕಾನುವಾದ)
7. **ಅಶ್ವತ್ಥಾಮನ್** (ಸರಳ ನಾಟಕಾನುವಾದ)
8. **ಪಾರಸಿಕರು** (ಸರಳ ನಾಟಕಾನುವಾದ)
9. **ಶ್ರೀನಾಟಕ ಕತೆಗಳು** (ಮಕ್ಕಳಿಗೆ)
10. ಶ್ರೀಯವರ ವಿವಿಧ ಆಕಾರದ ವರ್ಣಚಿತ್ರಗಳು
11. B. M. S. – The Man and His Mission (Commemorative Volume)

**ACHARYA B. M. SRI. :** A life-sketch by **Prof. L. S. SESHAGIRI RAO**.
Publishers : B. M. Sri. Smaraka Pratishthana, 54, ARAVINDA, III Road, Gavipuram Extension, Bangalore 560 019. pp : 39+iv
Price : Rs. 2-00 5,000 Copies. First Print : January 3, 1984.

ಬೆಲೆ ರೂ. ೨



ಪ್ರಕಟನೆ : ಬಿ. ಎಂ. ಶ್ರೀ. ಜನ್ಮದಿನ
(ಜನವರಿ ೩, ೧೯೮೪)

ಮುದ್ರಣ :
ರಾಷ್ಟ್ರೋತ್ಥಾನ ಮುದ್ರಣಾಲಯ
ಬೆಂಗಳೂರು ೫೬೦ ೦೧೯

## ಮುನ್ನುಡಿ

ಕನ್ನಡ ನಾಡಿನ ಏಕೀಕರಣಕ್ಕಾಗಿ, ಕನ್ನಡ ನುಡಿಯ ಏಳಿಗೆಗಾಗಿ ತಮ್ಮ ಬಾಳನ್ನು ಮುಡಿಪಾಗಿಟ್ಟು ಹಲವು ಹಿರಿಯರು ಮನಮುಟ್ಟಿ ದುಡಿದರು. ಈ ಶತಮಾನದ ಮೊದಲಲ್ಲಿ ನಾಡು ಹರಿದು ಹಂಚಿಹೋಗಿತ್ತು, ನುಡಿ ಕಳೆಗುಂದಿತ್ತು. ಅನ್ಯಭಾಷೆಗಳ ವ್ಯಾಮೋಹದಿಂದ ಕನ್ನಡ ಜನರು ತಮ್ಮತನವನ್ನು ಕಳೆದುಕೊಂಡಿದ್ದರು. ಇಂಥ ಪರಿಸ್ಥಿತಿಯಲ್ಲಿ ಮತ್ತೆ ಕನ್ನಡವು ತಲೆಯೆತ್ತುವಂತೆ, ನಾಡು ಒಂದಾಗುವಂತೆ ಶ್ರಮಿಸಿದ ಹಿರಿಯರನ್ನು ಕೃತಜ್ಞತೆಯಿಂದ ನೆನೆಯುವುದು, ಅವರ ಜೀವನ ಮತ್ತು ಸಾಧನೆಗಳನ್ನು ತಿಳಿದುಕೊಳ್ಳುವುದು, ಅವುಗಳಿಂದ ಪ್ರೇರಣೆಯನ್ನು ಪಡೆದು ನಾಡುಕಟ್ಟುವ ಕೆಲಸದಲ್ಲಿ ತೊಡಗುವುದು ಇಂದಿನ ಹಾಗೂ ಮುಂದಿನ ಪೀಳಿಗೆಗಳ ಕರ್ತವ್ಯವಾಗಿದೆ.

ಈ ದೃಷ್ಟಿಯಿಂದ ಬಿ. ಎಂ. ಶ್ರೀ. ಪ್ರತಿಷ್ಠಾನವು ದಿವಂಗತ ಬಿ.ಎಂ. ಶ್ರೀಕಂಠಯ್ಯನವರ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ನೆರವೇರಿಸಲು ಸಂಕಲ್ಪಿಸಿದೆ. ಈ ಸಂದರ್ಭದಲ್ಲಿ 'ಶ್ರೀ'ಯವರ ಜೀವನ ಮತ್ತು ಸಾಧನೆಗಳ ಪರಿಚಯವನ್ನು ನಾಡಿನ ಜನತೆಗೆ, ವಿಶೇಷವಾಗಿ ಶ್ರೀಸಾಮಾನ್ಯನಿಗೆ ಮತ್ತು ಬೆಳೆಯುತ್ತಿರುವ ಮಕ್ಕಳಿಗೆ ಮಾಡಿ ಕೊಡಬೇಕೆಂದು ಅವರ ಜೀವನ ಚರಿತ್ರೆಯನ್ನು ಪ್ರಕಟಿಸುವುದಲ್ಲದೆ ಅವರ ಕೆಲವು ಕೃತಿಗಳ ಆಶಯವನ್ನು ಸರಳವಾದ ರೂಪದಲ್ಲಿ ನಿರೂಪಿಸುವ ಚಿಕ್ಕಪುಸ್ತಕಗಳನ್ನು ಹೊರ ತರಬೇಕೆಂದು ಉದ್ದೇಶಿಸಿದೆ. ಇದರಿಂದ 'ಶ್ರೀ'ಯವರು ಕನ್ನಡದ ಸರ್ವತೋಮುಖವಾದ ಅಭಿವೃದ್ಧಿಗಾಗಿ, ಹೊಸ ಸಾಹಿತ್ಯದ ನಿರ್ಮಾಣಕ್ಕಾಗಿ ಎಂಥ ಅಮೋಘಕಾರ್ಯವನ್ನು ಮಾಡಿದರು ಎಂಬುದರ ಅರಿವು ಉಂಟಾಗುವುದೆಂದು ಹಾರೈಸಲಾಗಿದೆ.

ಶತಮಾನೋತ್ಸವ ಗ್ರಂಥಪ್ರಕಟನ ಸಮಿತಿಯು ಕೋರಿಕೆಯನ್ನು ಮನ್ನಿಸಿ ಪ್ರಖ್ಯಾತ ಲೇಖಕರಾದ ಶ್ರೀ ಎಲ್. ಎಸ್. ಶೇಷಗಿರಿ ರಾಯರು 'ಶ್ರೀ'ಯವರ ಜೀವನ ಚರಿತ್ರೆಯನ್ನು ಸಾಮಾನ್ಯ ಜನಕ್ಕೆ ಅರ್ಥವಾಗುವ ರೀತಿಯಲ್ಲಿ ಬರೆದುಕೊಟ್ಟಿದ್ದಾರೆ. ಅದೀಗ ಪುಸ್ತಕ ರೂಪದಲ್ಲಿ ಪ್ರಕಟವಾಗುತ್ತಿದೆ. ಸ್ವಲ್ಪ ಅವಕಾಶದಲ್ಲಿ ಇದನ್ನು ಬರೆದುಕೊಟ್ಟ ಶ್ರೀ ಶೇಷಗಿರಿ ರಾಯರಿಗೆ ಸಮಿತಿಯ ಪರವಾಗಿ ನಾನು ಹಾರ್ದಿಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಬೆಂಗಳೂರು
೮–೧೨–೧೯೮೩

ರಂ. ಶ್ರೀ. ಮುಗಳಿ
ಅಧ್ಯಕ್ಷರು, ಗ್ರಂಥ ಪ್ರಕಟನೆ ಸಮಿತಿ

## ಉಪಕಾರ ಸ್ಮರಣೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ೧೯೮೪ನೆಯ ವರ್ಷದ ಉದ್ದಕ್ಕೂ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವವನ್ನು ವೈವಿಧ್ಯಪೂರ್ಣವಾಗಿ ಆಚರಿಸಲು ನಿರ್ಧರಿಸಿತು. ಅದರ ಅಂಗವಾಗಿ ಬಿ. ಎಂ. ಶ್ರೀ.ಯವರ ವ್ಯಕ್ತಿತ್ವ, ಕೃತಿಗಳು ಮತ್ತು ಸಾಧನೆಗಳನ್ನು ಕುರಿತು ಕೆಲವು ಪುಸ್ತಕಗಳನ್ನು ಪ್ರಸಿದ್ಧ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಬೇಕೆಂದು ಉತ್ಸವ ಸಮಿತಿ ನಿರ್ಧರಿಸಿತು. ಪುಸ್ತಕ ಪ್ರಕಟನೆಗಳ ಕಾರ್ಯವನ್ನು ನೋಡಿಕೊಳ್ಳಲು ಒಂದು ಪ್ರಕಟನ ಸಮಿತಿಯನ್ನು ನಿಯೋಜಿಸಲಾಯಿತು. ಖ್ಯಾತ ಹಿರಿಯ ಸಾಹಿತಿಗಳಾದ ಡಾ. ರಂ. ಶ್ರೀ. ಮುಗಳಿ ಅದರ ಅಧ್ಯಕ್ಷರಾಗಿದ್ದುಕೊಂಡು ದೊಡ್ಡ ಉಪಕಾರ ಮಾಡಿದ್ದಾರೆ. ಬರೆದು ಬಂದ ಹಸ್ತಪ್ರತಿಗಳನ್ನು ಪರಿಶೀಲಿಸಿ ಉಪಯುಕ್ತ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಅವರಿಗೆ ಪ್ರತಿಷ್ಠಾನ ಅತ್ಯಂತ ಋಣಿಯಾಗಿದೆ.

ಪುಸ್ತಕಗಳ ಪ್ರಕಟನ ಕಾರ್ಯದಲ್ಲಿ ಉತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರ ಅನುಭವಪೂರ್ಣ ಮಾರ್ಗದರ್ಶನದಿಂದ ಪ್ರತಿಷ್ಠಾನ ತುಂಬ ಉಪಕೃತವಾಗಿದೆ.

ಕನ್ನಡ ನಾಡಿನ ನವೋದಯದ ಶಿಲ್ಪಿಗಳಲ್ಲಿ ಒಬ್ಬರಾದ ಆಚಾರ್ಯ ಬಿ.ಎಂ.ಶ್ರೀಯವರನ್ನು, ಜನಸಾಮಾನ್ಯಕ್ಕೆ ಪರಿಚಯ ಮಾಡಿಕೊಡುವಂತೆ 'ಶ್ರೀ'ಯವರ ಶಿಷ್ಯವರ್ಗಕ್ಕೆ ಸೇರಿದವರೂ ಪ್ರಖ್ಯಾತ ವಿಮರ್ಶಕರೂ ವಿದ್ವಾಂಸರೂ ಆದ ಪ್ರೊ. ಎಲ್.ಎಸ್. ಶೇಷಗಿರಿ ರಾಯರನ್ನು ಕೇಳಿಕೊಂಡೆವು. ಬೆಳ್ಳೂರಿನಲ್ಲಿ ನಡೆಯುವ ಉತ್ಸವದ ಉದ್ಘಾಟನಾ ಸಮಾರಂಭದಲ್ಲಿ ಬಿಡುಗಡೆಯಾಗಲಿರುವ ಪುಸ್ತಕಗಳ ಪೈಕಿ ಇದೂ ಒಂದು. 'ಶ್ರೀ'ಯವರ ವ್ಯಕ್ತಿತ್ವವನ್ನು ಪರಿಚಯಮಾಡಿಕೊಟ್ಟು ಅವರ ಸೇವೆಯ ಹಲವು ಮುಖಗಳನ್ನು ನಿರೂಪಿಸುವುದೇ ಈ ಪುಸ್ತಕದ ಉದ್ದೇಶ. ಅದು ಯಶಸ್ವಿಯಾಗಿ ನೆರವೇರಿದೆ.

ಪುಸ್ತಕ ಬಿಡುಗಡೆಯ ವೇಳೆಗೆ ಅದು ಅಚ್ಚಾಗಿ ಸಿದ್ಧವಾಗಲು ಸಾಧ್ಯವಾಗುವಂತೆ ಅತ್ಯಲ್ಪ ಅವಧಿಯಲ್ಲಿ ಇದನ್ನು ಬರೆದುಕೊಟ್ಟ ಲೇಖಕ ಶ್ರೀ ಶೇಷಗಿರಿ ರಾಯರಿಗೂ, ಅಷ್ಟೇ ಬೇಗನೆ ಅಂದವಾಗಿ ಅಚ್ಚುಮಾಡಿಕೊಟ್ಟ ರಾಷ್ಟ್ರೋತ್ಥಾನ ಮುದ್ರಣಾಲಯಕ್ಕೂ ಪ್ರತಿಷ್ಠಾನದ ಕೃತಜ್ಞತೆಯ ವಂದನೆಗಳು ಸಲ್ಲುತ್ತವೆ.

ಬೆಂಗಳೂರು–೧೯
೧೨–೧೨–೧೯೮೩

ಎಂ. ವಿ. ಸೀತಾರಾಮಯ್ಯ
ಸಂಸ್ಥಾಪಕ ಕಾರ್ಯದರ್ಶಿ ಮತ್ತು
ಉಪಾಧ್ಯಕ್ಷ, ಉತ್ಸವ ಸಮಿತಿ

# ಆಚಾರ್ಯ ಬಿ. ಎಂ. ಶ್ರೀ.

"ನಮ್ಮ ಭಾಷೆಯನ್ನು ನಾವು ಎತ್ತದೇ ಹೋದರೆ,
ಎತ್ತುವರು ಯಾರು ? ಎತ್ತುವುದಕ್ಕೆ ನಿಂತರೆ,
ತಡೆಯುವವರು ಯಾರು ?"

– ಶ್ರೀ

ಕನ್ನಡ ನಾಡಿನಲ್ಲಿ ಆಡಳಿತ ಕನ್ನಡದಲ್ಲಿ ನಡೆಯಬೇಕು, ಇಲ್ಲಿ ವಿದ್ಯಾರ್ಥಿಗಳಿಗೆ ಪಾಠಗಳನ್ನು ಕನ್ನಡದಲ್ಲಿ ಹೇಳಿಕೊಡಬೇಕು, ಕನ್ನಡಕ್ಕೆ ಪ್ರಥಮಸ್ಥಾನವಿರಬೇಕು. ಇಂದು ನಮಗೆ ಇವೆಲ್ಲ ಸ್ಪಷ್ಟವಾದ ಸತ್ಯಗಳು ಎನ್ನಿಸುತ್ತದೆ. ಸರ್ಕಾರ ಜನಕ್ಕೆ ತಿಳಿಸಬೇಕಾದದ್ದನ್ನು ಅವರ ಭಾಷೆಯಲ್ಲಿ ತಾನೆ ತಿಳಿಸಬೇಕು ? ಇಲ್ಲಿನ ಮಕ್ಕಳು ಪರದೇಶದ ಭಾಷೆಯನ್ನು ಅರ್ಧಂಬರ್ಧ ಕಲಿತು ಅದರ ಮೂಲಕ ವಿದ್ಯೆ ಕಲಿಯಲು ಹೆಣಗುವುದಕ್ಕಿಂತ ತಮ್ಮ ಭಾಷೆಯಲ್ಲಿ ತಾನೆ ವಿದ್ಯೆ ಪಡೆಯಬೇಕು ? ಇವೆಲ್ಲ ನಮಗೆ ಅತ್ಯಂತ ಸಹಜವಾಗಿ ಕಾಣುತ್ತದೆ.

ಆದರೆ ಒಂದು ಕಾಲವಿತ್ತು – ಕನ್ನಡಿಗರು ಕನ್ನಡದಲ್ಲಿ ಮಾತನಾಡಲು ಸಂಕೋಚಪಡುತ್ತಿದ್ದ ಕಾಲ ; ಚೆನ್ನಾಗಿ ಬರುವ ಕನ್ನಡದಲ್ಲಿ ಮಾತನಾಡು ವುದಕ್ಕಿಂತ ತಪ್ಪು ಇಂಗ್ಲಿಷಿನಲ್ಲಿ ಮಾತನಾಡಲು ಹೆಮ್ಮೆಪಡುತ್ತಿದ್ದ ಕಾಲ ; ಸರ್ಕಾರದ ಆಡಳಿತವೆಲ್ಲ ಇಂಗ್ಲಿಷಿನಲ್ಲಿ ನಡೆಯುತ್ತಿದ್ದ ಕಾಲ ; ಪ್ರೌಢಶಾಲೆಗಳಲ್ಲಿ ಕಾಲೇಜುಗಳಲ್ಲಿ ಎಲ್ಲ ವಿಷಯಗಳನ್ನೂ ಇಂಗ್ಲಿಷಿನಲ್ಲಿ ಹೇಳಿಕೊಡುತ್ತಿದ್ದ ಕಾಲ. ತುಂಗಭದ್ರೆಯಿಂದಾಚೆ ಉತ್ತರ ಕರ್ನಾಟಕದಲ್ಲಿ ಮರಾಠಿಗೆ ಪ್ರಾಶಸ್ತ್ಯ. ಕನ್ನಡಕ್ಕೆ ಎಲ್ಲೂ ಸ್ಥಳವಿಲ್ಲ.

ಅದೂ ಬಹು ಹಿಂದಿನ ಕಾಲವೇನಲ್ಲ, ಸುಮಾರು ಅರವತ್ತು ವರ್ಷಗಳ ಹಿಂದೆ, ಅಷ್ಟೆ.

ಇದು ಸರಿಯಲ್ಲ ಎಂದು ಹಲವರು ಹಿರಿಯರಿಗೆ ತೋರಿತು. ಅವರೆಲ್ಲ ಕನ್ನಡಿಗರ ಸ್ಥಿತಿಯನ್ನು ಉತ್ತಮಗೊಳಿಸುವುದಕ್ಕೆ, ಅವರಿಗೆ ತಮ್ಮ ಸಾಹಿತ್ಯ ಸಂಸ್ಕೃತಿಗಳ ನೆನಪು ಮಾಡಿಕೊಟ್ಟು ಅವರ ಅಭಿಮಾನವನ್ನು ಎಚ್ಚರಿಸುವುದಕ್ಕೆ, ಕನ್ನಡಕ್ಕೆ ನ್ಯಾಯವಾದ ಸ್ಥಾನವನ್ನು ಗಳಿಸಿಕೊಡುವುದಕ್ಕೆ ತಮ್ಮ ಶಕ್ತಿಮೀರಿ ದುಡಿದರು. ಡೆಪ್ಯುಟಿ ಚನ್ನಬಸಪ್ಪನವರು, ಆಲೂರು ವೆಂಕಟರಾಯರು, ಎಂ. ಗೋವಿಂದ ಪೈ, ಪಂಜೆ ಮಂಗೇಶರಾಯರು, ಮುದವೀಡು ಕೃಷ್ಣ ರಾಯರು ಹೀಗೆ ಹಲವಾರು ಮಂದಿ ದುಡಿದರು.

ಈ ನಾಡಿನ ಭಾಗ್ಯಶಿಲ್ಪಿಗಳ ಪಂಕ್ತಿಯಲ್ಲಿ ದೊಡ್ಡ ಸ್ಥಾನ ಬಿ. ಎಂ. ಶ್ರೀಕಂಠಯ್ಯನವರದು. ಕನ್ನಡಿಗರು ಬೆಳಗ್ಗೆ ತಂಪುಹೊತ್ತಿನಲ್ಲಿ ಸ್ಮರಿಸಬೇಕಾದ ಹಿರಿಯರಲ್ಲಿ ಒಬ್ಬರು ಇವರು.

ಅವರ ಶಿಷ್ಯರಿಗೆ, ಅವರ ಬರಹಗಳನ್ನು ಓದಿ ಮಾತುಗಳನ್ನು ಕೇಳಿ ಸ್ಫೂರ್ತಿ ಪಡೆದವರಿಗೆ ಅವರು ಆಚಾರ್ಯ 'ಶ್ರೀ'.

- ೧ -

## ಬಾಲ್ಯ, ವಿದ್ಯಾಭ್ಯಾಸ

ಶ್ರೀಕಂಠಯ್ಯನವರು ಹುಟ್ಟಿದ್ದು ೧೮೮೪ ರ ಜನವರಿ ಮೂರರಂದು. ಅವರ ತಂದೆ ಬೆಳ್ಳೂರು ಮೈಲಾರಯ್ಯ, ತಾಯಿ ಭಾಗೀರಥಮ್ಮ. ಮೈಲಾರಯ್ಯ ನವರು ಬೆಳ್ಳೂರಿನವರು, ಶ್ರೀರಂಗಪಟ್ಟಣದಲ್ಲಿ ವಕೀಲರು, ಒಳ್ಳೆಯ ಹೆಸರು ಗಳಿಸಿ ಒಳ್ಳೆಯ ಸಂಪಾದನೆ ಕಾಣುತ್ತಿದ್ದ ವಕೀಲರು. ಅವರಿಗೆ ಐದು ಜನ ಮಕ್ಕಳು. ಶ್ರೀಕಂಠಯ್ಯ ಮೊದಲ ಮಗು. ತುಂಟತನ ಮಾಡಿಕೊಂಡು ಶ್ರೀರಂಗಪಟ್ಟಣದ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದ ಹುಡುಗ ಪ್ರೌಢ ಶಾಲೆಯ ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಹೋದ. ಅಲ್ಲಿಂದ ಕಾಲೇಜು ವಿದ್ಯಾಭ್ಯಾಸಕ್ಕೆ ಬೆಂಗಳೂರಿಗೆ ಬಂದ. ೧೯೦೩ರಲ್ಲಿ ಸೆಂಟ್ರಲ್ ಕಾಲೇಜಿನಿಂದ ಬಿ.ಎ. ಪದವೀಧರನಾದ.

ಬಿ.ಎಲ್. ಮಾಡಬೇಕು, ಎಂ.ಎ. ಮಾಡಬೇಕು ಎಂದು ಶ್ರೀಕಂಠಯ್ಯ ನವರ ಆಸೆ. ಅದಕ್ಕೆ ಬೆಂಗಳೂರಿನಲ್ಲಿ ಅವಕಾಶವಿರಲಿಲ್ಲ. ಮದರಾಸಿಗೆ ಹೋದರು. ೧೯೦೬ರಲ್ಲಿ ಬಿ.ಎಲ್.ನಲ್ಲಿ ಉತ್ತೀರ್ಣರಾದರು. ಆದರೆ ವಕೀಲ

ರಾಗಬೇಕೆಂಬ ಬಯಕೆಯೇನೂ ಇದ್ದಂತೆ ಕಾಣುವುದಿಲ್ಲ. ಮರುವರ್ಷ ಎಂ.ಎ. ಪದವಿಯನ್ನು ಪಡೆದರು. ಆಗಿನ ಕಾಲದಲ್ಲಿ ಹಿಂದಿನ ಮೈಸೂರು ಸಂಸ್ಥಾನದ ಸರ್ಕಾರ ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ನಡೆಸುತ್ತಿತ್ತು. ಇದರಲ್ಲಿ ಮೊದಲ ಎರಡು ಸ್ಥಾನಗಳನ್ನು ಪಡೆದವರನ್ನು ನೇರವಾಗಿ ಅಸಿಸ್ಟೆಂಟ್ ಕಮೀಷನರನ್ನಾಗಿ ನೇಮಕ ಮಾಡುತ್ತಿತ್ತು. ಶ್ರೀಕಂಠಯ್ಯನವರು ಆ ಪರೀಕ್ಷೆಗೆ ಕುಳಿತರು. ರ್‍ಯಾಂಕ್ ಬರಲಿಲ್ಲ. ೧೯೦೯ರಲ್ಲಿ ಇಪ್ಪತ್ತೈದು ವರ್ಷದ ಶ್ರೀಕಂಠಯ್ಯನವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಮತ್ತು ಕನ್ನಡ ಲೆಕ್ಚರರ್ ಆಗಿ ಕೆಲಸಕ್ಕೆ ಸೇರಿದರು.

ಮದರಾಸಿನಲ್ಲಿ ಓದುತ್ತಿದ್ದಾಗಲೇ ಅವರೂ ಅವರ ಕೆಲವರು ಸ್ನೇಹಿತರೂ ಕನ್ನಡ ಭಾಷೆ ಬೆಳೆಯುವ ರೀತಿ ಹೇಗೆ ಎಂದು ಯೋಚಿಸುತ್ತಿದ್ದರು ಎಂದು ಕಾಣುತ್ತದೆ. ಸಂಜೆ ಹೊತ್ತು ಸಮುದ್ರತೀರಕ್ಕೆ ಹೋಗಿ ಕುಳಿತುಕೊಳ್ಳುವುದು ಅವರ ಪದ್ಧತಿ. ಹಲವು ಸಂಜೆಗಳು ಅವರೂ ಅವರ ಗೆಳೆಯರೂ ಕನ್ನಡ ನಾಡಿನಲ್ಲಿ ಕನ್ನಡದ ದುರದೃಷ್ಟದ ಸ್ಥಿತಿ, ಅದನ್ನು ಉತ್ತಮಗೊಳಿಸುವ ಬಗೆ ಇದನ್ನು ಕುರಿತು ಯೋಚಿಸುತ್ತಿದ್ದರು ಎಂದು ಕಾಣುತ್ತದೆ. ೧೯೧೧ರಲ್ಲಿ, ಎಂದರೆ ಅವರು ಎಂ. ಎ. ಮುಗಿಸಿದ ನಾಲ್ಕು ವರ್ಷಗಳ ನಂತರ, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಇಂದಿಗೂ ಆ ಉಪನ್ಯಾಸವನ್ನು ಓದಿದರೆ ಬೆರಗಾಗುತ್ತೇವೆ – ಕನ್ನಡ ಸ್ಥಿತಿಯನ್ನು ಕುರಿತು ಎಷ್ಟು ಆಳವಾಗಿ ಯೋಚಿಸಿದ್ದಾರೆ, ಎಷ್ಟೊಂದು ಮುಖಗಳನ್ನು ಗುರುತಿಸಿದ್ದಾರೆ ಎಂದು. ಕನ್ನಡ-ಸಂಸ್ಕೃತಗಳ ಸಂಬಂಧ, ಕನ್ನಡ-ಇಂಗ್ಲಿಷಿನ ಸಂಬಂಧ, ಹಿಂದಿನ ಕನ್ನಡ ಸಾಹಿತ್ಯವನ್ನು ಕುರಿತ ಆಕ್ಷೇಪಣೆಗಳು, ಅವು ಎಷ್ಟು ನಿಜ, ಹಿಂದಿನ ಗ್ರಂಥಗಳ ಶೇಖರಣೆ ಮತ್ತು ರಕ್ಷಣೆ, ಕನ್ನಡ ಭಾಷೆಯನ್ನು ಆಧುನಿಕ ಕಾಲದ ಅಗತ್ಯಗಳಿಗೆ ಹೊಂದಿಕೊಳ್ಳುವಂತೆ ಬೆಳೆಸಲು ಮಾರ್ಗಗಳು ಇವೆಲ್ಲವನ್ನೂ ಗಮನಿಸುತ್ತಾರೆ. ಸ್ಪಷ್ಟವಾದ ಅಭಿಪ್ರಾಯಗಳನ್ನು ಹೇಳುತ್ತಾರೆ. 'ಕನ್ನಡದ ಉದ್ಧಾರವಾಗಬೇಕು' ಎಂದು ಅಭಿಮಾನದಿಂದ ಹೇಳುವುದಷ್ಟೇ ಅಲ್ಲ, ಖಚಿತವಾದ ವಿಧಾನಗಳನ್ನು ಸೂಚಿಸುತ್ತಾರೆ. ಇದೆಲ್ಲ ನಾಲ್ಕು ದಿನಗಳ ಯೋಚನೆಯಿಂದ ಸಾಧ್ಯವಾಗುವುದಿಲ್ಲ. ಹಲವು ವರ್ಷಗಳ ಚಿಂತನೆ, ವಿಚಾರ

ವಿನಿಮಯ, ಚರ್ಚೆ ಅಗತ್ಯ. ವಿದ್ಯಾರ್ಥಿಯಾಗಿದ್ದಾಗಲೇ ಶ್ರೀಕಂಠಯ್ಯನವರು ಕನ್ನಡದ ಸಮಸ್ಯೆಯನ್ನು ತಲೆಗೆ ಹಚ್ಚಿಕೊಂಡಿದ್ದರು ಎನ್ನುವುದು ಸ್ಪಷ್ಟ.

**ಅಧ್ಯಾಪಕರು**

ಕಾಲೇಜಿನಲ್ಲಿ ಶ್ರೀಕಂಠಯ್ಯನವರು ಬಹು ಬೇಗ ವಿದ್ಯಾರ್ಥಿಗಳ ಮೆಚ್ಚಿನ ಉಪಾಧ್ಯಾಯರಾದರು. ೧೯೧೪ ರಲ್ಲಿ ಅಸಿಸ್ಟೆಂಟ್ ಪ್ರೊಫೆಸರಾದರು. ಕೆಲವು ವರ್ಷಗಳ ನಂತರ ಇಂಗ್ಲಿಷ್ ಪ್ರೊಫೆಸರ್ ಮತ್ತು ಗೌರವ ಕನ್ನಡ ಪ್ರೊಫೆಸರ್ ಆಗಿ ನೇಮಕವಾದರು. (ಸ್ವಲ್ಪಕಾಲ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರೂ ಆಗಿದ್ದರು.) ಇಂಗ್ಲಿಷ್ ಎಂ. ಎ. ತರಗತಿಗಳಿಗೆ ಮಾತ್ರವಲ್ಲದೆ ಕನ್ನಡ ಎಂ. ಎ. ತರಗತಿಗಳಿಗೂ ಪಾಠ ಹೇಳುತ್ತಿದ್ದರು. ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯಗಳ ಮೇಲೆ ಅವರದು ವಿಶಿಷ್ಟ ಪ್ರಭುತ್ವ. ಇಂಗ್ಲಿಷ್ ಮೂಲಕ ಯೂರೋಪಿನ ಹಲವು ಸಾಹಿತ್ಯಕೃತಿಗಳನ್ನು ಅಭ್ಯಾಸಮಾಡಿದ್ದರು. ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಸಂಸ್ಕೃತದಲ್ಲಿ ಪರಿಶ್ರಮವಿತ್ತು. ತಮಿಳಿನಲ್ಲಿ ವಿದ್ವಾಂಸರು. ಗ್ರೀಕ್ ಭಾಷೆ ಕಲಿತು ಆ ಸಾಹಿತ್ಯವನ್ನು ಅದೇ ಭಾಷೆಯಲ್ಲಿ ಓದಿದವರು. ಎಂದೂ ಸಿದ್ಧತೆ ಇಲ್ಲದೆ ತರಗತಿಗೆ ಕಾಲಿಡುವವರಲ್ಲ. ಒಂದು ದಿನ ಅವರ ಸಹಉಪಾಧ್ಯಾಯರೊಬ್ಬರು ಬೆಳಗ್ಗೆ ಅವರ ಮನೆಗೆ ಹೋದರು. ಶ್ರೀಕಂಠಯ್ಯನವರೊಡನೆ ಮಾತನಾಡುತ್ತಿದ್ದರು. ಕಾಲೇಜಿಗೆ ಹೊರಡುವ ಸಮಯವಾಯಿತು. ಇಬ್ಬರೂ ಶ್ರೀಕಂಠಯ್ಯನವರ ಕಾರಿನಲ್ಲಿ ಹೊರಟರು. ಶ್ರೀಕಂಠಯ್ಯನವರು ದಾರಿಯುದ್ದಕ್ಕೂ ಒಂದು ಪುಸ್ತಕವನ್ನು ಅವಲೋಕಿಸುತ್ತಿದ್ದರು. ಅವರ ಸ್ನೇಹಿತರು ಕುತೂಹಲದಿಂದ, "ಪುಸ್ತಕ ಯಾವುದು? ಹೊಸದಾಗಿ ಬಂದದ್ದೆ?" ಎಂದು ಕೇಳಿದರು. ಶ್ರೀಕಂಠಯ್ಯನವರು, "ಅಲ್ಲ. ಇದು 'ಹ್ಯಾಮ್ಲೆಟ್'. ಈಗ ಹೋಗುತ್ತಲೇ ತರಗತಿ ಇದೆ. ಒಂದು ಸಲ ಓದಿಕೊಳ್ಳದೆ ತರಗತಿಗೆ ಹೋಗಲು ಧೈರ್ಯ ಬರುವುದಿಲ್ಲ" ಎಂದರು. ಆ ಹೊತ್ತಿಗೆ ಶ್ರೀಕಂಠಯ್ಯನವರು ಇಪ್ಪತ್ತೈದು-ಮೂವತ್ತು ವರ್ಷ ಪಾಠ ಹೇಳಿದ್ದರು, ಷೇಕ್ಸ್‌ಪಿಯರನ 'ಹ್ಯಾಮ್ಲೆಟ್' ನಾಟಕದ ಪ್ರತಿ ಪಂಕ್ತಿಯೂ ಅದರ ನಾಲಗೆಯಲ್ಲಿದ್ದಿರಬೇಕು. ಸಾಹಿತ್ಯವನ್ನು ಸವಿದು ಅದರ ಸಂತೋಷವನ್ನು ತಮ್ಮ ವಿದ್ಯಾರ್ಥಿಗಳ ಜೊತೆಗೆ

ಪಂಚಿಕೊಳ್ಳುವ ಅಧ್ಯಾಪಕರು ಅವರು. ಜೊತೆಗೇ ಅದರ ಶಾಸ್ತ್ರಭಾಗವನ್ನೂ ವಿವರಿಸುವರು. ವ್ಯಾಕರಣ, ಅಲಂಕಾರ, ಛಂದಸ್ಸು ಇವುಗಳ ಅಂಶವನ್ನೂ ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಡಬಲ್ಲವರು. ಅವರ ವಿದ್ವತ್ತು ಅಪಾರವಾದದ್ದು. ಆದರೆ ಅದು ಒಣಪಾಂಡಿತ್ಯವಲ್ಲ. ಸಾಹಿತ್ಯದ ಆಸ್ವಾದಕ್ಕೆ ನೆರವಾಗುವ ಪಾಂಡಿತ್ಯ, ಬೆಳಕಿಗೆ ಪರಿಮಳ ಸೇರಿದಂತೆ. ಅವರದು ಕೇಳಿದರೆ ಸಂತೋಷವಾಗುವ ಕಂಠ, ಓದುವ ರೀತಿ ಗಂಭೀರ. ಇಂಗ್ಲಿಷಿನಲ್ಲಾಗಲಿ ಕನ್ನಡದಲ್ಲಾಗಲಿ ಅವರು ಪದ್ಯವನ್ನು ಓದಿದರೆ ಭಾವಪೂರ್ಣವಾಗಿ ಓದುವುದಷ್ಟೇ ಅಲ್ಲ. ಅದರ ಛಂದಸ್ಸನ್ನು ವಿವರಿಸಿ ಛಂದಸ್ಸಿನ ಸ್ವರೂಪ, ಅದರ ಪರಿಣಾಮ ಎರಡೂ ಸ್ಪಷ್ಟವಾಗುವಂತೆ ಓದುವರು. ಛಂದಸ್ಸು ಕವನಕ್ಕೆ ಸಾಂಪ್ರದಾಯಿಕವಾದ ಚೌಕಟ್ಟು ಎಂದು ಸಾಮಾನ್ಯವಾಗಿ ಭಾವಿಸುವುದುಂಟು. ಹಾಗಲ್ಲ, ಅದು ಕವನದ ಪರಿಣಾಮಕ್ಕೆ ಪೋಷಕವಾಗುತ್ತದೆ ಎಂಬುವನ್ನು ಶ್ರೀಕಂಠಯ್ಯನವರು ತೋರಿಸಿಕೊಟ್ಟದ್ದರಿಂದ ಅವರು ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತೀರ್ಣರಾಗಲು ನೆರವಾದದ್ದು ಮಾತ್ರವಲ್ಲ, ಮುಂದೆ ಕವಿಗಳಾಗಲಿದ್ದ ಅವರ ವಿದ್ಯಾರ್ಥಿಗಳಿಗೆ ಅತ್ಯಗತ್ಯ ಒಳನೋಟಗಳನ್ನು ಲಭ್ಯಮಾಡಿಕೊಟ್ಟರು. ೧೯೩೦ರಲ್ಲಿ ಶ್ರೀಕಂಠಯ್ಯನವರಿಗೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಸೀನಿಯರ್ ಇಂಗ್ಲಿಷ್ ಪ್ರೊಫೆಸರಾಗಿ ವರ್ಗವಾಯಿತು. ೧೯೩೮ರಲ್ಲಿ ಮೈಸೂರಿನ ಶ್ರೀಮನ್ಮಹಾರಾಜರು ಅವರಿಗೆ 'ರಾಜಸೇವಾಸಕ್ತ' ಬಿರುದನ್ನು ಕೊಟ್ಟರು. ಅದೇ ವರ್ಷ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಯಾದರು. ೧೯೪೧ರಲ್ಲಿ ಅವರ ಶಿಷ್ಯರೂ ಅಭಿಮಾನಿಗಳೂ ಅವರಿಗೆ 'ಸಂಭಾವನೆ' ಎಂಬ ಗೌರವಗ್ರಂಥವನ್ನು ಸಮರ್ಪಿಸಿ ಸನ್ಮಾನಿಸಿದರು. ಹಿರಿಯರಿಗೆ ಗೌರವಗ್ರಂಥವನ್ನು ಸಮರ್ಪಿಸುವ ಸಂಪ್ರದಾಯ ಕನ್ನಡ ನಾಡಿನಲ್ಲಿ ಅಂದು ಪ್ರಾರಂಭವಾಯಿತು. ೧೯೪೨ರ ಜನವರಿಯಲ್ಲಿ ವಿಶ್ವವಿದ್ಯಾನಿಲಯದ ಸೇವೆಯಿಂದ ನಿವೃತ್ತರಾದರು.

ಆದರೆ ಅಧ್ಯಾಪಕವೃತ್ತಿ ಅವರನ್ನು ಬಿಡಲಿಲ್ಲ. ೧೯೪೪ರಲ್ಲಿ ಧಾರವಾಡದ ಕೆ. ಇ. ಬೋರ್ಡಿನ ಮುಖ್ಯಸ್ಥರು ಅವರು ತಮ್ಮ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಾಲರಾಗಬೇಕೆಂದು ಪ್ರಾರ್ಥಿಸಿದರು. ಆಗ ಶ್ರೀಕಂಠಯ್ಯನವರಿಗೆ ಅರವತ್ತು ವರ್ಷ. ಆರೋಗ್ಯ ಅಷ್ಟೇನೂ ಸಮರ್ಪಕವಾಗಿರಲಿಲ್ಲ. ಸಿಹಿಮೂತ್ರ

ರೋಗ, ರಕ್ತದ ಒತ್ತಡ ಎರಡೂ ಅವರನ್ನು ಕಾಡುತ್ತಿದ್ದವು. ಕನ್ನಡದ ಕೆಲಸಕ್ಕಾಗಿ ಹಲವಾರು ವರ್ಷಗಳ ಕಾಲ ಬಿಡುವಿಲ್ಲದೆ ಪ್ರವಾಸ ಮಾಡಿ ಕಾರ್ಯಕ್ರಮಗಳನ್ನು ನಡೆಸಿದ್ದರು. ಆದರೂ ಅವರು ಧಾರವಾಡದ ಆಹ್ವಾನವನ್ನು ಒಪ್ಪಿದರು. ಇದರಿಂದಲೂ ಕನ್ನಡಿಗರ ಒಗ್ಗಟ್ಟಿಗೆ ನೆರವಾ ದೀತು ಎಂದು ಅವರಿಗೆ ಎನ್ನಿಸಿರಬೇಕು. ೧೯೪೬ರ ಜನವರಿ ೫ರಂದು, ಅವರ ಅರವತ್ತೆರಡನೆಯ ಹುಟ್ಟಿದ ದಿನದ ಎರಡೇ ದಿನಗಳ ನಂತರ ಅವರು ಇದ್ದಕ್ಕಿದ್ದಂತೆ ಧಾರವಾಡದಲ್ಲಿ ನಿಧನರಾದರು.

## ಬಾಳು ತಂದ ನೋವು

ಶ್ರೀಕಂಠಯ್ಯನವರ ಜೀವನದ ಈ ರೂಪರೇಖೆಯನ್ನು ನೋಡಿದಾಗ ಅವರ ಬಾಳು ಬಹು ಸುಗಮವಾದದ್ದು, ನೆಮ್ಮದಿಯಾಗಿದ್ದ ಕುಟುಂಬದಲ್ಲಿ ಹುಟ್ಟಿದರು, ಒಳ್ಳೆಯ ಶಿಕ್ಷಣ ಪಡೆದರು, ತಮ್ಮ ಇಲಾಖೆಯಲ್ಲಿ ಮೆಟ್ಟಿಲು ಮೆಟ್ಟಿಲಾಗಿ ಸಾಕಷ್ಟು ವೇಗವಾಗಿಯೇ ಏರಿ ಮೂವತ್ತೈದನೆಯ ವರ್ಷದಲ್ಲಿ ಜೂನಿಯರ್ ಪ್ರೊಫೆಸರ್ ಆದರು, ನಲವತ್ತಾರನೆಯ ವಯಸ್ಸಿಗೆ ಸೀನಿಯರ್ ಪ್ರೊಫೆಸರ್ ಆದರು, ಕೀರ್ತಿ ಗಳಿಸಿದರು, ಜನಸಾಮಾನ್ಯರ ಆದರ ಗೌರವ ಗಳನ್ನು ಸಂಪಾದಿಸಿದರು, ಮಹಾರಾಜರಿಂದ ಸನ್ಮಾನಿತರಾದರು, ಸಾವಿರಾರು ಮಂದಿ ಶಿಷ್ಯರ ಮೆಚ್ಚಿಗೆ ಪ್ರೀತಿಗಳನ್ನು ಗಳಿಸಿದರು, ಅವರದು ಸುಖವಾದ ಬಾಳು ಎನ್ನಿಸಬಹುದು.

ಅವರನ್ನು ದೂರದಿಂದ ನೋಡಿದವರಿಗೆ ಎನ್ನಿಸುತ್ತಿದ್ದುದೂ ಹೀಗೆಯೇ. ಅವರು ತಮ್ಮ ದುಃಖವನ್ನು ಯಾರೊಡನೆಯೂ ಸಾಮಾನ್ಯವಾಗಿ ಹೇಳಿ ಕೊಳ್ಳುತ್ತಿರಲಿಲ್ಲ. ಅವರ ಸ್ವಭಾವವೇ ಗಂಭೀರ. ಕನ್ನಡದ ಕೆಲಸಕ್ಕಾಗಿ ಊರೂರು ಅಲೆಯುತ್ತ, ಎಲ್ಲರನ್ನೂ ಮಂದಹಾಸದಿಂದ ವಿಶ್ವಾಸವಾಗಿ ಮಾತ ನಾಡಿಸುತ್ತ, ಕನ್ನಡದ ಕೆಲಸ ಮಾಡುವವರ ಬೆನ್ನು ತಟ್ಟುತ್ತ ಅವರು ನಡೆದು ಕೊಳ್ಳುತ್ತಿದ್ದ ರೀತಿಯನ್ನು ಕಂಡ ಯಾರಿಗೂ ಅವರ ಮನಸ್ಸಿನಲ್ಲಿ ನಾಟಿದ್ದ ಮುಳ್ಳುಗಳ ಬಗ್ಗೆ ಸಂಶಯವೂ ಬರುತ್ತಿರಲಿಲ್ಲ.

ಅವರಿಗೆ ಒಬ್ಬನೇ ಮಗ, ಬುದ್ಧಿವಂತ. ಚಿಕ್ಕ ಹುಡುಗನಾಗಿದ್ದಾಗ ಅವನಿಗೆ ಕಣ್ಣುನೋವು ಬಂದಿತು. ಮನೆಯಲ್ಲಿ ಯಾರೋ ಹೇಳಿದ

ಯಾವುದೋ ಔಷಧಿ ಹಾಕಿದ ಪರಿಣಾಮವಾಗಿ [ಮೈಲತುತ್ತ (Copper Sulphate) ಎಂದು ಬಲ್ಲವರು ಕೆಲವರ ಹೇಳಿಕೆ.] ಅವನ ಕಣ್ಣುಗಳೇ ಹೋದವು. ಇದಾದ ಸ್ವಲ್ಪ ಕಾಲದಲ್ಲಿ ಶ್ರೀಕಂಠಯ್ಯನವರ ಹೆಂಡತಿ ತೀರಿಕೊಂಡರು. ಆಗ ಅವರಿಗಿನ್ನೂ ಮೂವತ್ತು-ಮೂವತ್ತೊಂದು ವರ್ಷ. ಅವರು ಮತ್ತೆ ಮದುವೆಯಾಗಲಿಲ್ಲ. ದುಃಖವನ್ನು ನುಂಗಿಕೊಂಡು ಕೆಲಸದಲ್ಲಿ ಮುಳುಗಿದರು. ಕೆಲವೇ ವರ್ಷಗಳನಂತರ ಅವರ ತಾಯಿ ಮರಣಹೊಂದಿದರು. ಈ ದುಃಖ ಇನ್ನೂ ಬಿಸಿಯಾಗಿದ್ದಾಗಲೇ, ಎರಡೇ ವಾರಗಳಲ್ಲಿ, ಅವರ ಅಳಿಯ (ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕ) ಬುದ್ಧಿವಂತ ತರುಣ, ತೀರಿಕೊಂಡ. ಕಣ್ಣುಗಳನ್ನು ಕಳೆದುಕೊಂಡ ಮಗ, ಗಂಡನನ್ನು ಕಳೆದುಕೊಂಡ ಮಗಳು ಮನೆಯಲ್ಲಿ. ಶ್ರೀಕಂಠಯ್ಯನವರು ಈ ದುಃಖದ ವಿಷವನ್ನೂ ನುಂಗಿಕೊಂಡು ತಮ್ಮ ಕೆಲಸದಲ್ಲಿ ಮಗ್ನರಾದರು. ಎದೆಯಲ್ಲಿನ ಬೇಗುದಿ ಯನ್ನು ಸಾಮಾನ್ಯವಾಗಿ ತೋರಗೊಡುತ್ತಿರಲಿಲ್ಲ. ಯಾವಾಗಲೋ ಒಮ್ಮೊಮ್ಮೆ ಬಹಳ ಹತ್ತಿರದವರೊಡನೆ ದುಃಖವನ್ನು ತೋಡಿಕೊಳ್ಳುತ್ತಿದ್ದರು. ಸಹೋದರಿಗೆ ಒಂದು ಸಲ ಹೇಳಿದರಂತೆ, "ಒಳ್ಳೆಯದನ್ನೊ ಕೆಟ್ಟದ್ದನ್ನೊ ಮಾಡಬೇಕು ಅಂತ ಭಗವಂತನಿಗೆ ಎನ್ನಿಸಿದಾಗ ಮೊದಲು ಅವನ ಕಣ್ಣಿಗೆ ನಾನೇ ಬೀಳುತ್ತೇನೆ" ಎಂದು. ವಿ. ಸೀತಾರಾಮಯ್ಯನವರ ಬಳಿ ಯಾವುದೋ ವಿಷಯ ಮಾತನಾಡುತ್ತಾ ಹೇಳಿದರಂತೆ, "ಒಬ್ಬ ಮಗಳು ಸಣ್ಣ ವಯಸ್ಸಿನಲ್ಲಿ ಜೊತೆ ಕಳೆದುಕೊಂಡು ಕಷ್ಟದಲ್ಲಿದ್ದಾಳೆ. ನನಗೆ ತಾಯಾಗಿ, ಹೊಟ್ಟೆಯ ಮಗಳಾಗಿ ನನ್ನನ್ನು ನೋಡಿಕೊಳ್ಳುತ್ತಿದ್ದಾಳೆ. ಎಷ್ಟು ಆಕೆಯ ಬಗೆಗೆ ಸಮಾಧಾನ ಮಾಡಿಕೊಂಡರೂ ಆಕೆಯನ್ನು ನೋಡಿದಾಗಲೆಲ್ಲ, ನೆನೆಸಿ ಕೊಂಡಾಗಲೆಲ್ಲ ಆ ಮಗುವಿನ ನೋವು ತಟ್ಟುತ್ತದೆ. ನೀವು ಬಲ್ಲಿರಿ, ಇನ್ನೊಬ್ಬ ಮಗ ಪೂರ್ತಿ ಕಣ್ಣು ಕಾಣದ ಸ್ಥಿತಿಯಲ್ಲಿದ್ದಾನೆ." ಅವರ ವಿದ್ಯಾರ್ಥಿಗಳಾಗಿದ್ದ ಎ. ಎಸ್. ಮೂರ್ತಿರಾಯರು ತರಗತಿಯಲ್ಲಿ ನಡೆದ ಒಂದು ಪ್ರಸಂಗವನ್ನು ಸ್ಮರಿಸಿಕೊಂಡಿದ್ದಾರೆ. ಮ್ಯಾಥ್ಯು ಆರ್ನಲ್ಡ್ ಎನ್ನುವ ವಿಮರ್ಶಕನ ಒಂದು ಪ್ರಬಂಧದಲ್ಲಿ ಆತ ಇಟಲಿಯ ಮಹಾಕವಿ ದಾಂತೆಯ 'In His will is our peace' (ಅವನ, ಎಂದರೆ ಭಗವಂತನ ಸಂಕಲ್ಪದಲಿ ನಮ್ಮ ಮನಶ್ಶಾಂತಿ) ಎಂಬ ಪಂಕ್ತಿಯನ್ನು ಉದ್ಧರಿಸುತ್ತಾನೆ. 'ಶ್ರೀ' ಅವರು ತರಗತಿಯಲ್ಲಿ ಈ

ಈ ಪ್ರಬಂಧವನ್ನು ಪಾಠ ಮಾಡುವಾಗ ಆ ವಾಕ್ಯವನ್ನು ಓದಿ, ಕಣ್ಮುಚ್ಚಿಕೊಂಡು 'In His will is our peace, In His will is our peace' ಎಂದು ತಮಗೆ ತಾವೇ ಹೇಳಿಕೊಂಡರಂತೆ.

ಶ್ರೀಕಂಠಯ್ಯನವರು ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕೆಲವರು ಸಾಹಿತಿಗಳೊಡನೆ ತೀವ್ರವಾದ ಭಿನ್ನಾಭಿಪ್ರಾಯ ಉಂಟಾಯಿತು. ಸಭೆಯಲ್ಲಿ ಅವರು ಶ್ರೀಕಂಠಯ್ಯನವರ ಕೆಲವು ನಿರ್ಧಾರಗಳನ್ನು ಉಗ್ರವಾಗಿ ಟೀಕಿಸಿದರು. ಶ್ರೀಕಂಠಯ್ಯನವರು 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂಬ ಹೆಸರನ್ನು 'ಕರ್ನಾಟಕ ಸಾಹಿತ್ಯ ಪರಿಷತ್ತು' ಎಂದು ಮಾರ್ಪಡಿಸಿದುದಕ್ಕೆ ಕಟುವಾದ ಆಕ್ಷೇಪಣೆ ಬಂದಿತು. ವಾದವಿವಾದದ ಸುಂಟರಗಾಳಿಯೇ ಎದ್ದಿತು. ಅಶ್ವತ್ಥಾಮ ಚಿರಂಜೀವಿ ಎಂದು ನಮ್ಮಲ್ಲಿ ನಂಬಿಕೆ. ಶ್ರೀಕಂಠಯ್ಯನವರ 'ಅಶ್ವತ್ಥಾಮನ್' ನಾಟಕದಲ್ಲಿ ಆತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇದರಿಂದ ಸಂಪ್ರದಾಯಪ್ರಿಯರ ರೋಷ ಉಕ್ಕಿತು. ಶ್ರೀಕಂಠಯ್ಯನವರ ವಿದ್ವತ್ತು, ಭಾರತೀಯ ಸಂಸ್ಕೃತಿಯಲ್ಲಿ ಅವರ ಅಭಿಮಾನ ಎಲ್ಲವನ್ನೂ ಹಲವರು ಪ್ರಶ್ನಿಸಿದರು. ಇಂತಹ ಟೀಕೆಗಳಿಂದ ಅವರ ಮನಸ್ಸು ನೋಯುತ್ತಿತ್ತು. ಆದರೆ ಅವರು ಕಠಿಣವಾಗಿ ಮಾತನಾಡಿದವರಲ್ಲ, ವಾದವಿವಾದದ ಮರ್ಯಾದೆಯ ಎಲ್ಲೆಯಿಂದ ಬಹು ಹಿಂದೆ ನಿಂತವರೇ ವಿನಾ ಎಲ್ಲೆಯ ಹತ್ತಿರ ಹೋದವರೂ ಅಲ್ಲ.

## ವ್ಯಕ್ತಿತ್ವ

ಶ್ರೀಕಂಠಯ್ಯನವರ ವ್ಯಕ್ತಿತ್ವ ನೋಡುತ್ತಲೇ ಗೌರವವನ್ನು ಮೂಡಿಸುವಂತಹದು. ಅಗಲವಾದ ತುಂಬಿದ ಮುಖ. ಗಾಂಭೀರ್ಯವೇ ಅವರ ಮುಖದಲ್ಲಿ ಮನೆಮಾಡಿತ್ತು. ಮಾತು ಮೃದು. ಅವರ ಹಸ್ತಗಳು ಆಗ ಅರಳಿದ ನಸುಗೆಂಪು ಗುಲಾಬಿಯ ಹಾಗೆ ಎನ್ನುವುದು ಉತ್ಪ್ರೇಕ್ಷೆಯಲ್ಲ. ಕೆಲಸದಿಂದ ನಿವೃತ್ತರಾಗುವವರೆಗೆ ಕಾಲೇಜಿಗೆ ಬರುವಾಗ, ಸಾಮಾನ್ಯವಾಗಿ ಸಾರ್ವಜನಿಕ ಸಮಾರಂಭಗಳಿಗೆ ಬರುವಾಗ ಪರಾಯಿ, ಕಾಲರು ಮುಚ್ಚಿದ ಕೋಟು. ಜರತಾರಿ ರುಮಾಲು ಧರಿಸುತ್ತಿದ್ದರು. ಉಡುಪಿನ ವಿಷಯದಲ್ಲಿ ಅವರು ಶ್ರದ್ಧೆ ವಹಿಸುತ್ತಿದ್ದಂತೆ ಕಾಣುತ್ತಿತ್ತು. ಆಡಂಬರವಿಲ್ಲದ, ಒಳ್ಳೆಯ

ಅಭಿರುಚಿಯ ಉಡುಪು. ಅವರ ಬೂಟುಗಳ ಮೇಲೆ ಒಂದಿಷ್ಟೇ ಕೊಳೆ ಇದ್ದುದನ್ನು ನಾನಂತೂ ಒಂದು ದಿನವೂ ಕಾಣಲಿಲ್ಲ. ನಿವೃತ್ತರಾದ ಮೇಲೆ ಸಾರ್ವಜನಿಕ ಸಮಾರಂಭಗಳಿಗೆ ಬರುವಾಗ ಕಚ್ಚೆ ಪಂಚೆ. ಕುತ್ತಿಗೆ ಮುಚ್ಚಿದ ಕೋಟು, ಟೋಪಿ ಧರಿಸಿ ಬರುತ್ತಿದ್ದರು.

ಶ್ರೀಕಂಠಯ್ಯನವರ ಮಾತು ಕಡಿಮೆ. ಆದರೆ ಜನರೊಡನೆ ವಿಶ್ವಾಸದಿಂದ ಬೆರೆಯಬಲ್ಲರು. ಪ್ರವಾಸ ಹೋದಾಗ ಕಾಣಲು ಬಂದವರನ್ನೆಲ್ಲ ನಗುನಗುತ್ತ ಮಾತನಾಡಿಸುವರು. ಕಿರಿಯರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುವರು. ಒಮ್ಮೊಮ್ಮೆ ಪ್ರಶ್ನೆ ಕೇಳುವವರು 'ಶ್ರೀ'ಯವರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಪ್ರಶ್ನಿಸುವರು. ಯುವಕರೊಬ್ಬರು ಒಮ್ಮೆ ಕೇಳಿದರು: "ನೀವೇಕೆ ಸಂಸ್ಕೃತವನ್ನು ದ್ವೇಷಿಸುತ್ತೀರಿ?" 'ಶ್ರೀ'ಯವರು ಸಮಾಧಾನದಿಂದ ಉತ್ತರ ಹೇಳಿದರು: "ನಾನು ಸಂಸ್ಕೃತದ್ವೇಷಿ ಎಂದು ನಿಮಗೆ ಯಾರು ಹೇಳಿದರು? ನಾನು ಸಂಸ್ಕೃತದ ಅಭಿಮಾನಿ. ಅದರಿಂದ ಹಿಂದೆ ಕನ್ನಡಕ್ಕೆ ಬೇಕಾದಷ್ಟು ಉಪಕಾರವಾಗಿದೆ. ಆದರೆ ಸಾಕಷ್ಟು ಹಾನಿಯೂ ಆಗಿದೆ. ಅದು ಕನ್ನಡದ ಕನ್ನಡತನವನ್ನೇ ಮುಚ್ಚಿಬಿಟ್ಟಿದೆ. ಅದರಿಂದ ಕನ್ನಡ ಪಾರಾಗಬೇಕು ಅನ್ನುವವನು ನಾನು, ಇದಕ್ಕಿಂತ ಹೆಚ್ಚಿನದನ್ನೇನೂ ನಾನು ಹೇಳಿಲ್ಲ. ನಿರ್ಧಾರ ನಿಮಗೆ ಬಿಡುತ್ತೇನೆ."

ಭಾಷಣಕಾರರಾಗಿ ಶ್ರೀಕಂಠಯ್ಯನವರು ಸಾವಿರಾರು ಜನರಿಗೆ ಸಂತೋಷ ನೀಡಿದರು. ಹೊಸ ವಿಷಯಗಳನ್ನು ತಿಳಿಸಿದರು, ಹೊಸ ರೀತಿಗಳಲ್ಲಿ ಯೋಚನೆ ಮಾಡುವಂತೆ ಪ್ರಚೋದಿಸಿದರು. ಇಂಗ್ಲಿಷ್, ಕನ್ನಡ ಎರಡು ಭಾಷೆಗಳಲ್ಲೂ ಅವರದು ಏಕರೀತಿಯಾದ ಪ್ರಭುತ್ವ. ತಡೆಯಿಲ್ಲದೆ ಗಂಟೆಗಟ್ಟಲೆ ಮಾತನಾಡ ಬಲ್ಲರು. ಅವರದು ಕಂಠಶ್ರೀ ಎನ್ನುವ ಮಾತು ನೂರಕ್ಕೆ ನೂರು ಸತ್ಯ. ಮಾತುಗಳು ಅತ್ಯಂತ ಉಚಿತವಾಗಿ ಒದಗಿಬಂದು ತಾವೇ ಹೆಣೆದುಕೊಳ್ಳುವಂತೆ ಭಾಸವಾಗುತ್ತಿತ್ತು. ಅವರು ಅಧ್ಯಾಪಕರಾದನಂತರ ಸ್ವಲ್ಪಕಾಲ ಕನ್ನಡದಲ್ಲಿ ಉಪನ್ಯಾಸ ಮಾಡುತ್ತಲೇ ಇರಲಿಲ್ಲವಂತೆ. ಆದರೆ ಆ ವರ್ಷಗಳಲ್ಲಿ ಅವರು ಹಿಂದಿನ ಕನ್ನಡ ಸಾಹಿತ್ಯವನ್ನೂ ವ್ಯಾಕರಣವನ್ನೂ ಛಂದಸ್ಸನ್ನೂ ಆಳವಾಗಿ ಅಭ್ಯಾಸಮಾಡಿದ್ದಿರಬೇಕು. ಎಷ್ಟೋಬಾರಿ ಅವರು ಕಡೆಯ ಗಳಿಗೆಯಲ್ಲಿ ಬಂದ ಪ್ರಾರ್ಥನೆಯನ್ನು ಮನ್ನಿಸಿ ಭಾಷಣ ಮಾಡಬೇಕಾಗುತ್ತಿತ್ತು. ವರ್ಷ

ಗಟ್ಟಲೆ ಅಧ್ಯಯನ. ಚಿಂತನೆ ಮಾಡಿದ್ದುದರಿಂದ ಇಂಗ್ಲಿಷಿನಲ್ಲಾಗಲಿ, ಕನ್ನಡದಲ್ಲಾಗಲಿ ಹೀಗೆ ಭಾಷಣ ಮಾಡುವುದು ಅವರಿಗೆ ಕಷ್ಟವಾಗುತ್ತಿರಲಿಲ್ಲ. ಒಂದು ವೈಶಿಷ್ಟ್ಯ ಎಂದರೆ ಅವರು ಹೈಸ್ಕೂಲು ವಿದ್ಯಾರ್ಥಿಗಳ ಸಭೆಗಳಲ್ಲಿ ಮಾತನಾಡುತ್ತಿದ್ದರು (ಅವರನ್ನು ನಾನು ಮೊದಲು ಕಂಡದ್ದು ನಾನು ವಿದ್ಯಾರ್ಥಿಯಾಗಿದ್ದ ಮಲ್ಲೇಶ್ವರಂ ಹೈಸ್ಕೂಲಿಗೆ ಬಂದು ಅವರು ಭಾಷಣ ಮಾಡಿದಾಗ), ಹಳ್ಳಿಗಳಲ್ಲಿ ಊರುಗಳಲ್ಲಿ ಸಾರ್ವಜನಿಕ ಭಾಷಣಗಳನ್ನು ಮಾಡುತ್ತಿದ್ದರು, ವಿದ್ವಾಂಸರ ಸಭೆಗಳಲ್ಲಿ ಉಪನ್ಯಾಸ ಮಾಡುತ್ತಿದ್ದರು. ಪ್ರತಿಯೊಂದು ಸಭೆಯಲ್ಲೂ ಅಲ್ಲಿನ ಸಭಿಕರಿಗೆ ಮನಮುಟ್ಟುವಂತೆ, ಅವರ ಗ್ರಹಿಕೆಯ ಮಟ್ಟದಲ್ಲಿ ಮಾತನಾಡುತ್ತಿದ್ದರು. ಅವರ ಇಂಗ್ಲಿಷ್ ಭಾಷಣವನ್ನು ಕೇಳಿದ ಒಬ್ಬ ಇಂಗ್ಲಿಷ್ ಪ್ರೊಫೆಸರು, "ನನಗೇನಾದರೂ ಪುನರ್ಜನ್ಮದಲ್ಲಿ ನಂಬಿಕೆ ಇದ್ದಿದ್ದರೆ ಶ್ರೀಕಂಠಯ್ಯನವರು ಹಿಂದಿನ ಜನ್ಮದಲ್ಲಿ ಆಕ್ಸ್‌ಫರ್ಡಿನಲ್ಲಿ ಪ್ರೊಫೆಸರಾಗಿದ್ದರೆಂದು ನಂಬುತ್ತಿದ್ದೆ" ಎಂದ. ಮತ್ತೊಬ್ಬ ಇಂಗ್ಲಿಷ್ ಪ್ರೊಫೆಸರು, "ಶ್ರೀಕಂಠಯ್ಯನವರು ಆಕ್ಸ್‌ಫರ್ಡಿಗೋ ಕೇಂಬ್ರಿಜಿಗೋ ಹೋದರೆ ಆ ವಿಶ್ವವಿದ್ಯಾನಿಲಯದವರು ಅವರನ್ನು ಅಲ್ಲಿಯೇ ನಿಲ್ಲಿಸಿಕೊಂಡು ಬಿಡುತ್ತಾರೆ" ಎಂದ. ಶ್ರೀಕಂಠಯ್ಯನವರು ಒಮ್ಮೆ ಬೆಳಗಾವಿಗೆ ಹೋದಾಗ ಕವಿತೆ. ಕಲೆ, ಗೀತ ಎಂಬ ವಿಷಯಗಳಲ್ಲಿ ಕಳೆಯುವ ಕಾಲ ವ್ಯರ್ಥ ಎಂದು ಅಲ್ಲಿನ ಹಿರಿಯರೊಬ್ಬರು ಹೇಳಿದರೆಂಬ ಮಾತು ಕಿವಿಗೆ ಬಿತ್ತು. ಆ ಮಾತನ್ನು ಹೇಳಿದವರ ಅಭಿಪ್ರಾಯ, ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯುತ್ತಿರುವಾಗ ಸಾಹಿತ್ಯ, ಕಲೆ ಇವುಗಳಲ್ಲಿ ಗಮನ ಏಕೆ ಎಂಬುದು. ಅಂದು ಶ್ರೀಕಂಠಯ್ಯನವರು ಆಗಲೆ ಎರಡು ಉಪನ್ಯಾಸಗಳನ್ನು ಮಾಡಿ ದಣಿದಿದ್ದರು. ಊರಿನ ಹಲವರು ಹಿರಿಯರು ಬಂದು, ಊರಿನಲ್ಲಿ ಅನೇಕರಿಗೆ ಕನ್ನಡ ಬರುವುದಿಲ್ಲ, ಅವರಿಗೆಲ್ಲ ನಿಮ್ಮ ಇಂಗ್ಲಿಷ್ ಉಪನ್ಯಾಸ ಕೇಳಬೇಕೆಂದು ಆಸೆ ಎಂದು ಹೇಳಿ ಭಾಷಣ ಮಾಡಬೇಕೆಂದು ಪ್ರಾರ್ಥಿಸಿದರು. ಶ್ರೀಕಂಠಯ್ಯನವರು ಒಪ್ಪಿದರು. ರಾತ್ರಿ ಹತ್ತು ಗಂಟೆಗೆ ಉಪನ್ಯಾಸ. ಅವರ ಉಪನ್ಯಾಸದ ಸಾರಾಂಶವನ್ನು ಅಂದು ಅಧ್ಯಕ್ಷತೆ ವಹಿಸಿದ್ದ ಡಾ. ವಿ. ಸೀತಾರಾಮಯ್ಯನವರ ಮಾತುಗಳಲ್ಲೇ ಕೇಳಬಹುದು : "ಕವಿಯಾದವನು ರಾಷ್ಟ್ರಕನೂ ಹೌದು. ಆಯುಧ ಹಿಡಿದು ಯುದ್ಧ ಮಾಡುವ ಸೈನಿಕನು ಮಾತ್ರವೇ ರಾಷ್ಟ್ರಕನಲ್ಲ.

ಅವನ (ಕವಿಯ) ನಿಲವು. ಸ್ಥಾನ. ಮಾರ್ಗ. ಕಾರ್ಯ ಬೇರೆ ; ಆದರೆ ಏತಕ್ಕೂ ಮನಸ್ಸನ್ನು ರೂಪಿಸಬಲ್ಲ, ಸ್ಫೂರ್ತಿ ಮೂಲವಾಗಬಲ್ಲ ... ಸ್ವಾತಂತ್ರ್ಯ ಚಳವಳಿಯಲ್ಲಿ ಕವಿಯನ್ನು ಅಲ್ಲಗಳೆಯಬಾರದು ; ಅವನ ಕಾರ್ಯವನ್ನು ಅವನ ರೀತಿಯಲ್ಲಿ ಅವನು ಮಾಡುತ್ತಾನೆ, ಅವನ ದೇಶಾಭಿಮಾನವನ್ನು ಅವನ ರೀತಿಯಲ್ಲಿ ತೋರಿಸುತ್ತಾನೆ ; ಇದು ಸರ್ವಥಾ ವ್ಯರ್ಥವಲ್ಲ." ವಿ. ಸೀ. ಹೇಳುತ್ತಾರೆ : "ಹನ್ನೆರಡು ಗಂಟೆಯಾಗಿತ್ತು. ಚಿತ್ರಾರ್ಪಿತರಾದಂತೆ ಅಷ್ಟೂ ಜನ ಮೌನವಾಗಿ ಕುಳಿತು ಭಾಷಣ ಕೇಳಿ, ಕಡೆಯಲ್ಲಿ ಪ್ರಶಂಸೆ, ಉದ್ಗಾರಗಳನ್ನು ಹೇಳಿದ್ದು, ಕೈ ಚಪ್ಪಾಳೆ ಹೊಡೆದದ್ದು ಎರಡು-ಮೂರು ನಿಮಿಷಗಳ ಕಾಲ ನಡೆಯಿತು. ಎಷ್ಟು ಜನ ಬಂದು ಅವರ ಕೈ ಕುಲಕಿದರು, ಕೃತಜ್ಞತೆ ಸೂಚಿಸಿದರು, ಅಪ್ಪಿಕೊಳ್ಳಲು ಬಂದರು ಎಂಬುದನ್ನು ನೋಡುವುದು ನನಗಂತೂ ಉತ್ಸಾಹಕರವಾಗಿತ್ತು."

ಅವರ ಕಡೆಯ ವರ್ಷಗಳಲ್ಲಿ ಮಾತು ಹೆಚ್ಚಾಯಿತು ಎಂದು ಅವರ ಸ್ನೇಹಿತರಿಗೂ ಅಭಿಮಾನಿಗಳಿಗೂ ಒಂದೊಂದು ಬಾರಿ ಎನ್ನಿಸಿದ್ದುಂಟು. ಎರಡೂವರೆ ಗಂಟೆ ಮೂರು ಗಂಟೆ ಭಾಷಣ. ಒಮ್ಮೊಮ್ಮೆ, ಹೇಳಿದುದೇ ಪುನರಾವೃತ್ತಿಯೂ ಆಗುತ್ತಿತ್ತು. ಆದರೆ ಕನ್ನಡಿಗರಿಗೆ ಇನ್ನೂ ತಮ್ಮ ಸಂಸ್ಕೃತಿಯ ಭಾಗ್ಯದ ನೆನಪಾಗಲಿ ಹೊಣೆಯ ಅರಿವಾಗಲಿ ಸಾಕಷ್ಟು ಮೂಡಿಲ್ಲ ಎಂಬ ಕಳಕಳಿ ಅವರು ಅಷ್ಟು ಮಾತನಾಡುವಂತೆ ಮಾಡುತ್ತಿತ್ತೇನೊ! ಅವರು ಹಿಂದಿನ ಮೈಸೂರು ಮಹಾರಾಜರುಗಳ ವಿಷಯದಲ್ಲಿ ಅತಿಯಾದ ರಾಜಭಕ್ತಿಯನ್ನು ತೋರಿಸುತ್ತಿದ್ದರೆಂಬ ಟೀಕೆಯೂ ಉಂಟು. ನಮಗೆ ಇವತ್ತು ಅವರ ರಾಜಭಕ್ತಿ ಮಿತಿಮೀರಿತು ಎಂದು ತೋರಬಹುದು. ಆದರೆ, ಅಂಗ್ಲೇಯರ ಕಾಲದ ರಾಜ್ಯಗಳ ರಾಜರೂ ನವಾಬರೂ ತಮ್ಮ ವೈಭವಕ್ಕಾಗಿ, ಸುಖಕ್ಕಾಗಿ ರಾಜ್ಯದ ಹಣವನ್ನೆಲ್ಲ ಚೆಲ್ಲುತ್ತಿದ್ದ ಕಾಲದಲ್ಲಿ* ಮೈಸೂರಿನ ಮಹಾರಾಜರುಗಳು ನಡೆದುಕೊಂಡ ರೀತಿ ಶ್ರೀಕಂಠಯ್ಯನವರ ಮೆಚ್ಚಿಗೆಯನ್ನು ಗಳಿಸಿರಬೇಕು. ಅಲ್ಲದೆ ಕನ್ನಡ ಭಾಷೆ ಮತ್ತು ಸಾಹಿತ್ಯಗಳಿಗೆ ಮೈಸೂರಿನ ರಾಜಮನೆತನ ನೀಡಿದ ಪ್ರೋತ್ಸಾಹ ಅವರ ಹೃದಯವನ್ನು ಗೆದ್ದಿರಬೇಕು.

---

*ಜುನಾಗಡ್‌ನ ನವಾಬ ಎರಡು ನಾಯಿಗಳ ಮದುವೆಯನ್ನು ಅದ್ದೂರಿಯಾಗಿ ನಡೆಸಿ, ಅಂದು ರಾಜ್ಯದಲ್ಲಿ ರಜಾ ಘೋಷಿಸಿದ!

ಶ್ರೀಕಂಠಯ್ಯನವರು ಕನ್ನಡಕ್ಕಾಗಿ ಮಾಡಿದ ಕೆಲಸವನ್ನು ಮುಂದೆ ವಿವರಿಸಿದೆ. ಭಾರತದ ಸಾಹಿತ್ಯಸಂಸ್ಕೃತಿಗಳಲ್ಲಿ ಬೇರು ಬಿಟ್ಟದ್ದು ಅವರ ಮನಸ್ಸು.* ಅವರು ಒಂದು ಇಂಗ್ಲಿಷ್ ಕವನವನ್ನು ಅನುವಾದಿಸಿ 'ಆಳ್ವ ಬ್ರಿಟಾನಿಯ' ಎಂದು ಹೆಸರಿಟ್ಟು ಪ್ರಕಟಿಸಿದರು. ಅವರ 'ಭರತಮಾತೆಯ ನುಡಿ' ಎಂಬ ಕವನದಲ್ಲಿ ದೇಶಾಭಿಮಾನ ತುಂಬಿ ತುಳುಕುತ್ತದೆ. ಭರತ ಮಾತೆಯನ್ನು,

**ಭರತಮಾತೆಯೆ, ಭರತಮಾತೆಯೆ, ಎಂದು ನೀ ತಲೆ ಎತ್ತುವೆ ?**
**ಎಂದು ನೀ ತಲೆ ಎತ್ತುವೆ, ಮುಗುಳೆಂದು ನಗೆಮುಖಳಾಗುವೆ ?**

ಎಂದು ಕಳಕಳಿಯಿಂದ ಪ್ರಶ್ನಿಸುವುದರೊಂದಿಗೆ ಕವನ ಪ್ರಾರಂಭವಾಗು ತ್ತದೆ. ಈ ಕವನದಲ್ಲಿ ಭರತಮಾತೆ ಬ್ರಿಟಾನಿಯಳನ್ನು (ಬ್ರಿಟನನ್ನು) 'ನನ್ನಿನಿಯ ತಂಗಿ' ಎಂದು ಕರೆದು, ಅವಳ ನೆರವನ್ನು ಪಡೆದೆ. ಅವಳು ದೇಶವನ್ನು ಗೆದ್ದು 'ಒಲುಮೆಕಟ್ಟನು ಹೊಸೆದಳು' ಎಂಬ ಮಾತನ್ನು ಹೇಳುವಂತೆ 'ಶ್ರೀ'ಯವರು ಚಿತ್ರಿಸಿದ್ದಾರೆ. ಇಂತಹ ಕವನಗಳ ಆಧಾರದ ಮೇಲೆ ಅವರು ಇಂಗ್ಲೆಂಡಿನ ಅಭಿಮಾನಿಗಳು ಎಂದು ಕೆಲವರು ಆಡುವುದುಂಟು. ಆದರೆ ಇಂದೂ ಅವರ ಸಾಹಿತ್ಯವನ್ನು ಓದುವವರಿಗೆ, ಅವರಿಗೆ ಭಾರತದಲ್ಲಿ ಪ್ರೀತಿ, ಮತ್ತು ಭಾರತ ಎಲ್ಲ ದೇಶಗಳ ನಡುವೆ ತಲೆ ಎತ್ತಿ ನಿಲ್ಲಬೇಕೆಂಬ ಹಂಬಲ ಎಷ್ಟು ಗಾಢವಾಗಿದ್ದವು ಎಂಬುದು ಸ್ಪಷ್ಟವಾಗುತ್ತವೆ. ಅವರ ಬರಹದ ಉಸಿರು ಈ ದೇಶದ ಸಂಸ್ಕೃತಿ, ಚಿಂತನೆ. ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷನ್ನು ವಿಶೇಷ ವಿಷಯವಾಗಿ ಅಭ್ಯಾಸಮಾಡುತ್ತಿದ್ದ ವಿದ್ಯಾರ್ಥಿಗಳ ಸಂಘ

---

* ಭಾರತದ ಹಳ್ಳಿಯ ಜನದ ಕಲ್ಯಾಣಕ್ಕಾಗಿ ಅವರ ಮನಸ್ಸು ಹಂಬಲಿಸಿದ್ದನ್ನು, ವಯಸ್ಕರ ಶಿಕ್ಷಣ ಸಮಿತಿಯ ಕೆಲಸವನ್ನು ವಿವರಿಸುತ್ತ ಅವರು ಹಳ್ಳಿಯ ಸೋದರಸೋದರಿಯರಿಗೆ ಹೇಳಿದ ಮಾತುಗಳು ಪ್ರತಿಬಿಂಬಿಸುತ್ತವೆ : "ನಮ್ಮ ನಾಡಿನಲ್ಲಿ ಹಳ್ಳಿಗಳೇ ಹೆಚ್ಚು. ಹಳ್ಳಿ ಚೆನ್ನಾಗಿ ಬಾಳಿದರೆ, ಸೊಗಸಾದರೆ, ಪಟ್ಟಣದ ಬಾಳೂ ಸೊಗಸೂ ಹಸನೂ ಆಗುತ್ತದೆ. ನಮಗಾಗಿ ಉಳುವವರು ನೀವು; ನೇಯುವವರು ನೀವು; ಕೂಲಿನಾಲಿ ದುಡಿಯುವ ನೀವೇ ನಮ್ಮ ನಾಡಿನ ಸಿರಿಯ ಅಡಿಗಲ್ಲು, ಒರೆಗಲ್ಲು, ನಿಮ್ಮನ್ನು ಬಾಳಿಸಿ ನಾವೂ ಬಾಳಬೇಕೆಂದು ಈ ಪವಿತ್ರಸೇವೆಯನ್ನು ನಾವು ಕೈಕೊಂಡಿದ್ದೇವೆ."

'ಇಂಗ್ಲಿಷ್ ಸೆಮಿನಾರ್'. ಈ ಸಂಘಕ್ಕೆ ಅವರು ಎರಡು ಧ್ಯೇಯವಾಕ್ಯಗಳನ್ನು ಕೊಟ್ಟಿದ್ದರು ; ಒಂದು 'ಧಿಯೋ ಯೋನಃ ಪ್ರಚೋದಯಾತ್.'

**ಬಾಳನ್ನು ನಡೆಸುವ ನಂಬಿಕೆ**

ಶ್ರೀಕಂಠಯ್ಯನವರ ವೈಯಕ್ತಿಕ ಜೀವನದಲ್ಲಿ ಆಘಾತಗಳು ಎರಗಿದ್ದವು. ಚಿಕ್ಕ ವಯಸ್ಸಿನಲ್ಲಿ ಅವರು ದುಃಖವನ್ನು ಕಂಡಿದ್ದರು. ಆದರೆ ಅವರಿಗೆ ಜಗತ್ತನ್ನು ನಡೆಸುವ ಒಂದು ದಿವ್ಯಶಕ್ತಿಯಲ್ಲಿ ಗಾಢವಾದ ನಂಬಿಕೆ. ಮಾನವನನ್ನು ಸತ್ಯದೆಡೆಗೆ, ಬೆಳಕಿನ ಕಡೆಗೆ ಕರೆದೊಯ್ಯುವ ಮಹಾಶಕ್ತಿ ಜಗತ್ತನ್ನು ನಡೆಸುತ್ತಿದೆ. ಅದರ ಪರವಾಗಿ ಶ್ರಮಿಸುವವರೆ ದೇವತೆಗಳು. ಅವಕ್ಕೆ ವಿರುದ್ಧವಾಗಿ ತಮಸ್ಸಿನ ಶಕ್ತಿಗಳು ಹೋರಾಡುತ್ತವೆ. ಈ ತಮಸ್ಸಿನ ಶಕ್ತಿಗಳ ಸಂತಾನವೇ ರಾಕ್ಷಸರು. ಒಳ್ಳೆಯತನ, ವಿದ್ಯೆ ಇವುಗಳ ವಿರುದ್ಧ ದುಷ್ಟತನ, ಅವಿದ್ಯೆ ಇವುಗಳ ಹೋರಾಟ ಜಗತ್ತು ಸೃಷ್ಟಿಯಾದಂದಿನಿಂದ ನಡೆಯುತ್ತಲೇ ಇದೆ. ಮನುಷ್ಯನ ಸೃಷ್ಟಿಯಾದಂದಿನಿಂದ ಅವನ ಹೃದಯ ಈ ಘರ್ಷಣೆಯ ರಂಗವಾಗಿದೆ. ಬ್ರಹ್ಮಪುತ್ರರು, ಬೆಳಕಿನ ಮಕ್ಕಳು ಈ ಹೋರಾಟ ದಲ್ಲಿ ಒಳ್ಳೆಯತನಕ್ಕೆ, ವಿದ್ಯೆಗೆ ಜಯ ಲಭಿಸಲಿ ಎಂದು ಬಯಸುತ್ತಾರೆ, ಮಾನವನಿಗಾಗಿ ಪ್ರಾರ್ಥನೆ ಮಾಡುತ್ತಾರೆ :

**ಋತವೊಂದೆ ಗೆಲ್ಲುವುದು, ಅನೃತವಲ್ಲು ;**
**ಅಮೃತಮೆನೆ ವಿದ್ಯೆ ; ಅವಿದ್ಯೆಯಲ್ತು ;**
**ವಿಶ್ವಭಾರತಿ ಶರಣು, ಕಿರುತೀರ್ಥಮಲ್ತು.**

(ಸತ್ಯವೇ ಗೆಲುತ್ತದೆ, ಸುಳ್ಳಲ್ಲ. ವಿದ್ಯೆಯೇ ಅಮೃತ, ಅವಿದ್ಯೆಯಲ್ಲ. ಕಾಪಾಡಲು ನಮಸ್ಕರಿಸಬೇಕಾದುದು ವಿಶ್ವಭಾರತಿಗೆ, ಸಣ್ಣ ಹೊಳೆಗಲ್ಲ.)

ಇದು ಅವರ 'ಶುಕ್ರಗೀತೆ'ಯಲ್ಲಿ ಪ್ರಕಟವಾಗುವ ದರ್ಶನ. 'ದ ಬರ್ಡನ್ ಆಫ್ ದ ಪ್ರಾಫೆಟ್ಸ್' ಎನ್ನುವುದು ಅವರಿಗೆ ಉಪನ್ಯಾಸಕ್ಕೆ ಪ್ರಿಯವಾದ ವಿಷಯ. ಸಾವಿರಾರು ವರ್ಷಗಳ ಅವಧಿಯಲ್ಲಿ ಮನುಕುಲದ ಪಯಣದ ಸಮೀಕ್ಷೆಯಾಗಿರು ತ್ತಿತ್ತು ಈ ಉಪನ್ಯಾಸ. ಅನಾಗರಿಕತೆಯ ಸ್ಥಿತಿಯಲ್ಲಿ, ಮೃಗಗಳಿಗೆ ಹತ್ತಿರದ ಸ್ಥಿತಿಯಲ್ಲಿ ಮಾನವಕೋಟಿ ಇತ್ತು. ಅದನ್ನು ವಿದ್ಯೆಯ ಕಡೆಗೆ, ನಯದ ಕಡೆಗೆ, ಸಂಸ್ಕೃತಿಯ ಕಡೆಗೆ, ಒಟ್ಟಿನಲ್ಲಿ ಸಂಪೂರ್ಣ ಮಾನವತ್ವದ ಕಡೆಗೆ

ಕರೆದೊಯ್ಯಲು ಪ್ರವಾದಿಗಳು ಅವತರಿಸಿದರು. ಮನುಷ್ಯ ತಲಪಬೇಕಾದ ಪರಿಪೂರ್ಣತೆಯ ಭವ್ಯದರ್ಶನ ಪಡೆದ ಋಷಿಗಳಂತೆ ಅವರು. ಅವರಿಗೆ ಉಗ್ರವಾದ ವಿರೋಧ ಕಾಣಿಸಿಕೊಂಡಿತು. ವಿರೋಧಿಸಿದವರು ಒಳ್ಳೆಯತನದ, ಜ್ಞಾನದ ಶತ್ರುಗಳು. ಅಂದಿನಿಂದ ಮಾನವಕುಲವನ್ನು ಮುನ್ನಡೆಸಲು ಬೇರೆ ಬೇರೆ ಯುಗಗಳಲ್ಲಿ, ಜಗತ್ತಿನ ಬೇರೆಬೇರೆ ಭಾಗಗಳಲ್ಲಿ ಮನುಷ್ಯನಿಗೆ ದಾರಿ ತೋರಿಸುವವರು ಕಾಣಿಸಿಕೊಂಡಿದ್ದಾರೆ. ಭವ್ಯ ಆದರ್ಶಗಳನ್ನು ಮನುಷ್ಯನ ಮುಂದಿಟ್ಟು ಅವನನ್ನು ಮುಂದಕ್ಕೊಯ್ಯಲು ಹೆಣಗಿದ್ದಾರೆ. ಅವರ ಸ್ಫೂರ್ತಿಯಿಂದ, ಶಕ್ತಿಯ ವರದಿಂದ ಮನುಷ್ಯ ನಾಲ್ಕು ಹೆಜ್ಜೆ ಮುನ್ನಡೆಯುತ್ತಾನೆ. ಆದರೆ ತನ್ನ ದೌರ್ಬಲ್ಯದಿಂದ ಎರಡು ಹೆಜ್ಜೆ ಹಿಂದಕ್ಕೆ ಸರಿಯುತ್ತಾನೆ, ಮುಗ್ಗರಿಸುತ್ತಾನೆ. ಮತ್ತೆ ಮಹಾತ್ಮರು ಅವತರಿಸುತ್ತಾರೆ, ಧೈರ್ಯ ತುಂಬುತ್ತಾರೆ, ಅವನ ಕೈಹಿಡಿದು ನಡೆಸುತ್ತಾರೆ. ಮತ್ತೆ ಮನುಷ್ಯ ಮುಂದಕ್ಕೆ ಅಡಿಯಿಡುತ್ತಾನೆ. ಆತನ ಮುನ್ನಡೆ ನಿಧಾನ, ನಿಜ. ಆಗಾಗ ಹಿಂಜರಿತವೂ ಉಂಟು. ಆದರೂ ಒಟ್ಟಿನಲ್ಲಿ ಮುಂದೆ ನಡೆಯುತ್ತಾನೆ. ಬೆಳಕಿನ ಕಡೆಗೆ, ನಾಗರಿಕತೆಯ ಕಡೆಗೆ, ಮಾನವತ್ವದ ಕಡೆಗೆ. ಒಂದಲ್ಲ ಒಂದು ದಿನ ಅವನು ಮನುಷ್ಯ ಎನ್ನಿಸಿಕೊಳ್ಳುವ ಯೋಗ್ಯತೆ ಪಡೆಯುತ್ತಾನೆ. ಜಗತ್ತು ಸುಖಶಾಂತಿಗಳ ಬೀಡಾಗುತ್ತದೆ. ಇದು ಅವರು ಈ ಉಪನ್ಯಾಸದಲ್ಲಿ ಸಾಮಾನ್ಯವಾಗಿ ಸಭಿಕರ ಮುಂದೆ ಇಡುತ್ತಿದ್ದ ಚಿತ್ರ.

ಬೇರೆಬೇರೆ ಸಂದರ್ಭಗಳಲ್ಲಿ ಶ್ರೀಕಂಠಯ್ಯನವರು ತಮ್ಮ ಆದರ್ಶಗಳು. ಬಯಕೆಗಳು ಇವನ್ನು ಕುರಿತು ವಿವರಿಸಿದ್ದುಂಟು. ಇಂತಹ ವಿವರಣೆಗಳಿಂದ ಕೆಲವು ಮಾತುಗಳನ್ನು ಸ್ಮರಿಸಬಹುದು.

"ಡಿಳ್ಳಿ ನನಗೆ ಬಲುದೂರ, ಕನ್ನಡ ನಾಡಿನ ಹಳ್ಳಿ ನನಗೆ ಸಾಕೆಂದು ನನ್ನ ವಿದ್ಯಾಭ್ಯಾಸ ಮುಗಿಯುವುದರೊಳಗೆ ನಿರ್ಧರಿಸಿಕೊಂಡೆನು."

"ಕನ್ನಡ ನಾಡನ್ನು ಸುತ್ತುವುದು ನನಗೊಂದು ಪವಿತ್ರ ಯಾತ್ರೆಯಾಗಿತ್ತು. ಮೈಸೂರಿನಲ್ಲಿ, ಹೊರಗೆ – ಮಡಕೇರಿ ಮೊದಲು ಬೆಳವಡಿ ಕಡೆಯಾಗಿ – ಯಾರ ಹೆಸರನ್ನು ಹೇಳಲಿ, ಯಾರನ್ನು ಬಿಡಲಿ ? ಜೈನರಲ್ಲಿ, ವೀರಶೈವರಲ್ಲಿ, ಮಾಧ್ವರಲ್ಲಿ, ಶ್ರೀವೈಷ್ಣವರಲ್ಲಿ, ಸ್ಮಾರ್ತರಲ್ಲಿ. ಒಕ್ಕಲಿಗರಲ್ಲಿ, ಮುಸಲ್ಮಾನರಲ್ಲಿ, ಕ್ರೈಸ್ತರಲ್ಲಿ – ಗಂಡಸರು, ಹೆಂಗಸರು, ಶಾಲೆಯ ಮಕ್ಕಳು – ಎಲ್ಲರೂ ನನಗೆ

ಒಳ್ಳೆಯಮಾತು ಆಡಿದ್ದೀರಿ; ನಲುಮೆಯ ನಡತೆಯನ್ನು ನಡೆದಿದ್ದೀರಿ; ಬೆನ್ನುತಟ್ಟಿ ಮುಂದೆ ಬಿಟ್ಟಿದ್ದೀರಿ – ಕನ್ನಡದ ಅಣುಗನೆಂದು. ಏನು ಚೆಲುವು ಕನ್ನಡ ನಾಡಿನದು, ಏನು ನಯ ಕನ್ನಡ ಮಕ್ಕಳದು! ನಿಮ್ಮ ಪ್ರೇಮವನ್ನೆಲ್ಲಾ ನನ್ನ ಹೃದಯದಲ್ಲಿ ತುಂಬಿಕೊಂಡಿದ್ದೇನೆ – ಹಿಡಿಯಲಾರದೆ ಅದು ಬಿರಿಯು ತ್ತಿದೆ. ದಾಳಿಂಬೆಯ ಹಣ್ಣಿನಂತೆ! ನಾನು ಇದರಲ್ಲಿ ಧನ್ಯ.

"ಒಲುಮೆಗಿಂತ ಗೆಲುವಿಲ್ಲ, ಒಕ್ಕೂಟಕ್ಕಿಂತ ಬಲವಿಲ್ಲ. ಸಣ್ಣದನ್ನು ದೊಡ್ಡದು ಮಾಡದೆ, ದೊಡ್ಡದನ್ನು ಸಣ್ಣದು ಮಾಡದೆ, ತಾಳ್ಮೆ, ಶಿಸ್ತು, ಅಚ್ಚುಕಟ್ಟು, ಒಕ್ಕೂಟ, ಒಲುಮೆ ಇವು ಕಲೆತರೆ ಕನ್ನಡ ನಾಡಿನ ಮಣ್ಣು ಹೊನ್ನಾಗುವುದು; ಬಾಳು ಬಾನಾಗುವುದು.

"ಧರ್ಮದ ಹೊಸ ಹುಟ್ಟು, ಭಾರತದ ಬಿಡುಗಡೆ. ಕರ್ನಾಟಕದ ಒಕ್ಕೂಟ, ಕನ್ನಡದಲ್ಲಿ ವಿಶ್ವಸಂಸ್ಕೃತಿ ಇವು ಎಲ್ಲೆಲ್ಲಿ ಮಿಡಿಯುತ್ತಿವೆ ಅಲ್ಲಿ ನಾನೂ ಮಿಡಿಯುತ್ತಿದ್ದೇನೆ. ನನ್ನ ಬಾಳಿಕೆಯಲ್ಲಿ ಮಿಕ್ಕಿರುವ ದುಡಿತವೂ ಇವಕ್ಕೇ.

ನಮಸ್ಕಾರ.

ಬೀಳ್ಕೊಡಿಂ ಎನಗೆ ಜೀವಾನಂದವಾಗಿರ್ದರೆಲ್ಲರ್ ಬೀಳ್ಕೊಡಿಂ, ನಾನ್ ಪೋಗಿ ಬರ್ಪೆನ್!"

— ೨ —

**ಬರೆದದ್ದು ಕಡಿಮೆ – ಏಕೆ?**

ಶ್ರೀಕಂಠಯ್ಯನವರು ಹುಟ್ಟು ಕವಿ, ನಾಟಕಕಾರರು. ಆದರೆ ಅವರು ಬರೆದದ್ದು ಹೆಚ್ಚಿಲ್ಲ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯವರು ಶ್ರೀಕಂಠಯ್ಯನವರು ಕನ್ನಡ ಭಾಷೆಯಲ್ಲಿ, ಇಂಗ್ಲಿಷ್ ಭಾಷೆಯಲ್ಲಿ ಬರೆದುದನ್ನೆಲ್ಲ ಡೆಮಿ ಅಷ್ಟಾಕಾರದ 'ಶ್ರೀ ಸಾಹಿತ್ಯ' ಎಂಬ ಹೆಸರಿನ ಪುಸ್ತಕದಲ್ಲಿ ಅಚ್ಚು ಮಾಡಿದ್ದಾರೆ. ಇದರಲ್ಲಿ 'ಶ್ರೀ'ಯವರ ಬರಹ ೮೦೮ ಪುಟಗಳಷ್ಟೆ. ಇದರಲ್ಲಿ ಅವರು ಇತರ ಪುಸ್ತಕಗಳಿಗೆ ಬರೆದ ಮುನ್ನುಡಿಗಳು, ಪುಸ್ತಕಗಳ ವಿಮರ್ಶೆಗಳು ಸೇರಿವೆ. ಸುಮಾರು ೫೫೦ ಪುಟಗಳಷ್ಟೆ ಕನ್ನಡ, ಉಳಿದದ್ದು ಇಂಗ್ಲಿಷ್ ಬರಹ. ೯೪ ಪುಟಗಳಷ್ಟು, ಎಂದರೆ ಸುಮಾರು ಮೂರು ಸಾವಿರ ಪಂಕ್ತಿ ಕವನಗಳು. 'ಗದಾಯುದ್ಧ ನಾಟಕಂ', 'ಅಶ್ವತ್ಥಾಮನ್' ಮತ್ತು 'ಪಾರಸಿಕರು' ಮೂರೇ ನಾಟಕಗಳು.

ಶ್ರೀಕಂಠಯ್ಯನವರ ಸೃಜನ ಸಾಹಿತ್ಯದ ಪ್ರಮಾಣ ಇಷ್ಟೇ. ಅದುದಕ್ಕೆ ಹಲವು ಕಾರಣಗಳುಂಟು. ಅವರು ಕಾಲೇಜಿನಲ್ಲಿ ಪ್ರಾಧ್ಯಾಪಕರು, ವಿಶ್ವ ವಿದ್ಯಾನಿಲಯದ ಸಮಿತಿಗಳ ಸದಸ್ಯರು. ಇದರಿಂದ ಅವರಿಗೆ ದೊರೆಯುತ್ತಿದ್ದ ವಿರಾಮ ಮಿತವಾದದ್ದು. ಕಡೆಯ ವರ್ಷಗಳಲ್ಲಿ ಅವರ ಆರೋಗ್ಯ ಅಷ್ಟೇನೂ ತೃಪ್ತಿಕರವಾಗಿರಲಿಲ್ಲ. ಅವರು ಬರೆದದ್ದರಲ್ಲಿ ಸ್ವಲ್ಪಭಾಗ ನಷ್ಟವಾಗಿರ ಬಹುದು. ಅವರು ಬರೆಯಲು ವಸ್ತುವನ್ನು ಆರಿಸಿಕೊಂಡನಂತರವೂ ಸಾಕಷ್ಟು ಕಾಲ ಮೆಲುಕು ಹಾಕುತ್ತಿದ್ದರು.

ಇನ್ನೊಂದು ಬಹು ಮುಖ್ಯ ಕಾರಣ ಅವರು ತಮ್ಮ ಕಾಲ, ಶಕ್ತಿಗಳಲ್ಲಿ ಬಹು ಭಾಗವನ್ನು ಕನ್ನಡದ ಕೆಲಸಕ್ಕಾಗಿ ವಿನಿಯೋಗಿಸಿದರೆಂಬುದು.

ಸ್ವತಃ ಒಳ್ಳೆಯ ಸಾಹಿತ್ಯವನ್ನು ಬರೆಯಬಲ್ಲ ಪ್ರತಿಭೆ ಇರುವವರಿಗೆ, ಈ ಬಗೆಯ ಸೃಷ್ಟಿಕಾರ್ಯ ಅಪಾರ ತೃಪ್ತಿಯನ್ನು ಕೊಡುತ್ತದೆ. ತಾವು ಬರೆಯುವುದನ್ನು ಬಿಟ್ಟು ತಮ್ಮ ಕಾಲ ಮತ್ತು ಶಕ್ತಿಗಳನ್ನು ಬೇರೆ ಕೆಲಸಕ್ಕೆ ಮುಡಿಪುಮಾಡುವುದು ಬಹು ದೊಡ್ಡ ತ್ಯಾಗ. ಶ್ರೀಕಂಠಯ್ಯನವರು ಇಂತಹ ತ್ಯಾಗವನ್ನು ಮಾಡಿದರು.

**ಅಂದು ಕನ್ನಡದ ಸ್ಥಿತಿ**

ಶ್ರೀಕಂಠಯ್ಯನವರು ಕನ್ನಡದ ಕೆಲಸಕ್ಕಾಗಿ ವಿಶ್ವವಿದ್ಯಾನಿಲಯದ ಇಂಗ್ಲಿಷ್ ವಿಭಾಗದಿಂದ ಹೊರಕ್ಕೆ ಕಾಲಿಡಲು ಮನಸ್ಸು ಮಾಡಿದ ದಿನಗಳಲ್ಲಿ ಕನ್ನಡ ನಾಡಿನ ವಾತಾವರಣ ಹೇಗಿತ್ತು ಎಂಬುದನ್ನು ಹಿಂದೆಯೇ ಸೂಚಿಸಿದೆ. ತುಂಗಭದ್ರೆಯಿಂದಾಚೆಗೆ ಮರಾಠಿಯ ಪ್ರಾಬಲ್ಯ. ಹೈದರಾಬಾದ್ ಸಂಸ್ಥಾನದ ಕನ್ನಡ ಪ್ರದೇಶದಲ್ಲಿ ಉರ್ದುವಿನ ಪ್ರಾಬಲ್ಯ, ಹಿಂದಿನ ಮೈಸೂರಿನಲ್ಲಿ ಇಂಗ್ಲಿಷಿನ ಪ್ರಾಬಲ್ಯ. ರಾಜಮನೆತನ ಕನ್ನಡದಲ್ಲಿ ಅಭಿಮಾನವಿಟ್ಟು ಅದರ ಬೆಳವಣಿಗೆಗೆ ಪ್ರೋತ್ಸಾಹ ಕೊಟ್ಟರೂ ಕಾರಣಾಂತರಗಳಿಂದ ಸರ್ಕಾರದ ಹಲವು ಉನ್ನತ ಹುದ್ದೆಗಳಲ್ಲಿ ಮದರಾಸು ಪ್ರಾಂತದಿಂದ ಬಂದವರೇ ಇದ್ದರು. ಇವರಿಗೆ ಕನ್ನಡ ಎಂದರೆ ತಾತ್ಸಾರ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷಿಗೆ ಪ್ರೊಫೆಸರ್ ಇದ್ದರು, ಗಣಿತ, ಭೌತವಿಜ್ಞಾನ, ಚರಿತ್ರೆ ಹೀಗೆ ಹಲವಾರು ವಿಷಯಗಳಿಗೆ ಪ್ರೊಫೆಸರ್ ಇದ್ದರು, ಕನ್ನಡಕ್ಕೆ ಪ್ರೊಫೆಸರ್ ಇಲ್ಲ. ಇಷ್ಟೇ

ಅಲ್ಲ, ಇತರ ವಿಷಯುಗಳನ್ನು ಪಾಠ ಹೇಳುವವರು 'ಲೆಕ್ಚರರು'ಗಳು ; ಅವರಿಗೆ ತಿಂಗಳಿಗೆ ಎಪ್ಪತ್ತೈದು ರೂಪಾಯಿ ಸಂಬಳ. ಕನ್ನಡ ಪಾಠ ಹೇಳುವವರು (ಭಾರತೀಯ ಭಾಷೆಗಳನ್ನು ಪಾಠ ಹೇಳುವವರು) 'ಪಂಡಿತರು', ಅವರಿಗೆ ನಲವತ್ತೈದು ರೂಪಾಯಿ ಸಂಬಳ. ಶ್ರೀಕಂಠಯ್ಯನವರು ವಿಶ್ವವಿದ್ಯಾನಿಲಯದಲ್ಲಿ ದೊಡ್ಡ ಹುದ್ದೆಗೇರಿದನಂತರವೂ, ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯಲ್ಲಿ ಅಥವಾ ಬೇರಾವುದಾದರೂ ಸಭೆಯಲ್ಲಿ ಅವರಾಗಲಿ ಅವರಂತೆ ಯೋಚಿಸುವ ಬೇರೊಬ್ಬರಾಗಲಿ ಕನ್ನಡಕ್ಕೆ ನ್ಯಾಯವಾದ ಮನ್ನಣೆ ಕೊಡಲು ಮಾತನಾಡಿದರೆ, ಅಲ್ಲಿದ್ದ ಕನ್ನಡಿಗರೇ ಹಲವರು 'The Kannada knights have stood up!' (ಕನ್ನಡದ ವೀರರು ಎದ್ದು ನಿಂತರು) ಎಂದು ಹಾಸ್ಯ ಮಾಡುತ್ತಿದ್ದರಂತೆ. ಪರ್ಷಿಯನ್ ಭಾಷೆಯಲ್ಲಿ ಎಂ. ಎ. ಅಭ್ಯಾಸ ಮಾಡಲು ಅವಕಾಶವಿತ್ತು, ಕನ್ನಡದಲ್ಲಿ ಇಲ್ಲ. (ಕನ್ನಡದಲ್ಲಿ ಆನರ್ಸ್ ಮತ್ತು ಎಂ. ಎ. ತರಗತಿಗಳು ಪ್ರಾರಂಭವಾದದ್ದು ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರಾಗಿದ್ದಾಗ.) ಪ್ರೊಫೆಸರ್ ಮೂರ್ತಿರಾಯರು ಶ್ರೀಕಂಠಯ್ಯನವರನ್ನು ಕುರಿತ ಪುಸ್ತಕದಲ್ಲಿ ಹೇಳುತ್ತಾರೆ, ಶ್ರೀಕಂಠಯ್ಯನವರು ಕನ್ನಡಕ್ಕಾಗಿ ಅಲೆದು ದುಡಿಯುತ್ತಿದ್ದ ದಿನಗಳಲ್ಲಿ ಮೈಸೂರು ಮಹಾರಾಜ ಕಾಲೇಜಿನ ಪ್ರೊಫೆಸರೊಬ್ಬರು ಮೂರ್ತಿರಾಯರನ್ನು ಕೇಳಿದರಂತೆ, "ಇದೇನು ಶ್ರೀಕಂಠಯ್ಯನವರು ಕನ್ನಡ ಅಂತ ಇಷ್ಟು ಗಲಾಟೆ ಮಾಡುತ್ತಿದ್ದಾರಲ್ಲ, ಇದರಲ್ಲಿ ಏನಾದರೂ ಹುರುಳು ಉಂಟೇ ?" ಎಂದು.

ಕನ್ನಡಿಗರು ಸುಮಾರು ಹತ್ತೊಂಬತ್ತು ಆಡಳಿತಗಳಲ್ಲಿ ಹಂಚಿ ಹೋಗಿದ್ದರು. ಮದರಾಸು, ಬೊಂಬಾಯಿ ಈ ಪ್ರಾಂತಗಳಲ್ಲಿ ಕರ್ನಾಟಕದ ಸ್ವಲ್ಪ ಭಾಗ ಇತ್ತು; ನಿಜಾಮರು ಆಳುತ್ತಿದ್ದ ಹೈದಾರಾಬಾದ್ ಸಂಸ್ಥಾನದಲ್ಲಿ ಇಷ್ಟು ಭಾಗ; ಇಡೀ ಮೈಸೂರು ಸಂಸ್ಥಾನ, ಇಡೀ ಕೊಡಗು ರಾಜ್ಯ (ಇದೂ ಮೈಸೂರಿನಲ್ಲಿದ್ದ ಬ್ರಿಟಿಷ್ ರೆಸಿಡೆಂಟನ ಕೈಯಲ್ಲಿ) ಕನ್ನಡವೇ. ಇದಲ್ಲದೆ ಹಲವು ಸಣ್ಣಪುಟ್ಟ ಸಂಸ್ಥಾನಗಳು. ತಮಿಳು, ಮರಾಠಿ, ಉರ್ದು, ತೆಲಗು, ಈ ಭಾಷೆಗಳ ಪ್ರಾಧಾನ್ಯವಿದ್ದ ಪ್ರದೇಶಗಳಲ್ಲಿ ಕನ್ನಡವನ್ನು ಕೇಳುವವರಿಲ್ಲ. ಕನ್ನಡ ನಾಡಿನ ಅರ್ಧ ಪ್ರದೇಶವಾದ ಮೈಸೂರು ಸಂಸ್ಥಾನದಲ್ಲಿ ಮದರಾಸಿನಿಂದ ಬಂದವರ ಅಧಿಕಾರ, ಸರ್ಕಾರದ ಆಡಳಿತವೆಲ್ಲ ಇಂಗ್ಲಿಷಿನಲ್ಲಿ. ಇಲ್ಲಿನ ಕನ್ನಡಿಗರಿಗೆ ಇಂಗ್ಲಿಷಿನ ಮೋಹ.

**"ಕನ್ನಡ ನಾಡಿಗೆ ಕನ್ನಡವೇ ಗತಿ"**

ಇಂತಹ ದಿನಗಳಲ್ಲಿ ಶ್ರೀಕಂಠಯ್ಯನವರು ಹೀಗೆ ಸಾರಿದರು :

"ಕನ್ನಡದ ಪರವಾಗಿ, ಕನ್ನಡದ ಮೇಲಿನ ಅಭಿಮಾನದಿಂದ, ನಾನು ಒಂದು ಮಾತನ್ನು ಹೇಳಿದ ಪಕ್ಷದಲ್ಲಿ ಅದನ್ನು ಸಂಕುಚಿತ ದೃಷ್ಟಿ ಎಂದು ಯಾರೂ ಹೇಳಬಾರದು. ಆ ಮಾತೇನೆಂದರೆ 'ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ.' ಸಂಸ್ಕೃತವಲ್ಲ. ಇಂಗ್ಲಿಷಲ್ಲ, ಹಿಂದಿಯಲ್ಲ. ಕನ್ನಡ."

ಸಂಸ್ಕೃತ, ಇಂಗ್ಲಿಷ್, ಹಿಂದಿ ಈ ಮೂರು ಭಾಷೆಗಳಿಂದ ಅಗತ್ಯವಾದುದನ್ನು ಕನ್ನಡಕ್ಕೆ ತಂದುಕೊಳ್ಳೋಣ ಎಂದು ಹೇಳುತ್ತ ಅವರೆಂದರು : "ಭಾಷೆಯೆನ್ನುವುದು ನಿತ್ಯಗಟ್ಟಳೆಯ ವ್ಯಾಪಾರಕ್ಕಾಗಿ ಇರುವುದು ಮಾತ್ರವಲ್ಲ. ಅದರ ಮುಖ್ಯಕಾರ್ಯ ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಮುಂದಕ್ಕೆ ತೆಗೆದುಕೊಂಡು ಹೋಗಲು ಸಾಧಕವಾಗುವುದು, ಆನಂದರಸವನ್ನು ಕಲೆಯ ಮೂಲಕ ಹೃದಯಕ್ಕೆ ತುಂಬುವುದು ; ಆತ್ಮೋದ್ಧಾರಕ್ಕೆ ಸೋಪಾನವಾಗುವುದು – ಒಂದು ಇಡಿಯ ಜನವನ್ನು ; ಅಲ್ಲೊಬ್ಬರನ್ನು ಇಲ್ಲೊಬ್ಬರನ್ನಲ್ಲ ; ಕೇವಲ ವಿದ್ಯಾಪಾರಂಗತರನ್ನಲ್ಲ ; ಜನಸಾಮಾನ್ಯವನ್ನು ; ನಾಡಿನ ಗಂಡಸರು, ಹೆಂಗಸರು, ಮಕ್ಕಳನ್ನು. ಈ ಕೆಲಸ ಕಷ್ಟಪಟ್ಟು ನಮ್ಮ ಬುದ್ಧಿಶಕ್ತಿಯನ್ನೆಲ್ಲ ವೆಚ್ಚಮಾಡಿ ಕಲಿಯುವ ಪರಭಾಷೆಯಿಂದ ನೆರವೇರುವುದಿಲ್ಲ. ಯಾವುದು ಸರಾಗವಾಗಿ ನಮ್ಮನ್ನು ಒಲಿದು ಬಂದಿರುತ್ತದೆಯೋ, ಯಾವುದು ನಮ್ಮನ್ನು ಬೆನ್ನಟ್ಟಿ ಬಂದು ರಕ್ತಗತವಾಗಿರುತ್ತದೆಯೋ ಅಂಥ ಭಾಷೆಯಿಂದ ಮಾತ್ರವೇ ಇದು ಸಾಧ್ಯ."

ಶ್ರೀಕಂಠಯ್ಯನವರು ಕನ್ನಡಿಗರಲ್ಲಿ ಜಾಗೃತಿಯನ್ನುಂಟುಮಾಡಬೇಕೆಂದು ಸಂಕಲ್ಪಿಸಿದ ದಿನಗಳಲ್ಲಿ ಕನ್ನಡದಲ್ಲಿ ಇದ್ದ ವೃತ್ತಪತ್ರಿಕೆಗಳು ಕೆಲವೇ. ಅವುಗಳ ಪ್ರಸಾರವೂ ಕಡಿಮೆ. ನೂರಕ್ಕೆ ಹತ್ತು-ಹನ್ನೆರಡು ಜನ ಅಕ್ಷರಸ್ಥರಿರುವ ನಾಡಿನಲ್ಲಿ, ಕಡುಬಡತನದ ನಾಡಿನಲ್ಲಿ ಪತ್ರಿಕೆಗಳನ್ನು ಎಷ್ಟು ಜನ ಓದುವರು ? ಈಗಿನಂತೆ ಬಸ್ ಸೌಕರ್ಯವಿಲ್ಲ, ವೇಗವಾದ ರೈಲುಗಳಿಲ್ಲ. ಆದುದರಿಂದ ಒಂದು ಪ್ರದೇಶದ ವೃತ್ತಪತ್ರಿಕೆ ಇನ್ನೊಂದು ಪ್ರದೇಶಕ್ಕೆ ಹೋಗುವುದು

ಕಡಮೆ. ರೇಡಿಯೊ ಇಲ್ಲ. ಇಂತಹ ಸನ್ನಿವೇಶದಲ್ಲಿ ಜನಗಳನ್ನು ಮುಟ್ಟಬೇಕಾದರೆ ನೇರವಾಗಿ ಹೇಳುವುದೊಂದೇ ಮಾರ್ಗ. ಎಂದರೆ ಊರೂರು ಸುತ್ತಬೇಕು. ಶ್ರೀಕಂಠಯ್ಯನವರು ಈ ಕಾರ್ಯವನ್ನು ಕೈಗೊಂಡರು, ಅದೂ ಬಹುಮಟ್ಟಿಗೆ ತಮ್ಮ ಖರ್ಚಿನಲ್ಲಿ. ಪ್ರಯಾಣ ಕಷ್ಟವಾದ ದಿನಗಳಲ್ಲಿ ಕನ್ನಡ ನಾಡಿನ ಮೂಲೆಮೂಲೆಗೆ ಭೇಟಿಕೊಟ್ಟರು. ಸಾಮಾನ್ಯ ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡಿದರು. ವಿದ್ಯಾರ್ಥಿಗಳ ಸಭೆಗಳಲ್ಲಿ ಮಾತನಾಡಿದರು, ಉಪಾಧ್ಯಾಯರ ಸಭೆಗಳಲ್ಲಿ ಭಾಷಣ ಮಾಡಿದರು, ಇತರ ವಿದ್ವಾಂಸರ ಸಭೆಗಳಲ್ಲಿ ಮಾತನಾಡಿದರು. ಹಿಂದಿನ ಕನ್ನಡ ಸಾಹಿತ್ಯ, ಕನ್ನಡ ಕವಿಗಳು-ಕೃತಿಗಳು ಇವನ್ನು ಕುರಿತು ಮಾತನಾಡಿ ಕನ್ನಡಿಗರಿಗೆ ಹಿರಿಯರಿಂದ ಬಂದ ಭಾಗ್ಯವನ್ನು ವಿವರಿಸಿದರು. ಕನ್ನಡ ನಾಡಿನಲ್ಲಿ ಕನ್ನಡಿಗರ ಮತ್ತು ಕನ್ನಡದ ಸ್ಥಿತಿಯನ್ನು ವಿವರಿಸಿದರು. ಜನರ ಕಣ್ಣು ಕಳೆದುಹೋದ ಕಾಲದ ಕಡೆಗೇ ಇದ್ದರೆ ಪ್ರಯೋಜನವಿಲ್ಲ. ಭವಿಷ್ಯದತ್ತಲೂ ಕಣ್ಣು ಹೊರಳಬೇಕು, ಆಧುನಿಕ ಮನೋಭಾವವನ್ನು ಬೆಳೆಸಿಕೊಳ್ಳಬೇಕು ಎಂದು ಎಚ್ಚರಿಸಿದರು. ಭವಿಷ್ಯ ಶುಭದಾಯಕವಾಗಲು ಮೂರ್ತ ವಿಧಾನಗಳನ್ನು ಸ್ಪಷ್ಟಪಡಿಸಿದರು.

ಹೀಗೆ ಪ್ರವಾಸ ಮಾಡುವುದು ಶ್ರೀಕಂಠಯ್ಯನವರಿಗೆ ಪ್ರಯಾಸಕರವೇ ಆಗಿತ್ತು. ಸಾಮಾನ್ಯವಾಗಿ ತಮ್ಮ ಕಾರಿನಲ್ಲಿ ತಮ್ಮ ಖರ್ಚಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಒಂದೇ ದಿನ ಹಲವು ಸಭೆಗಳಲ್ಲಿ ಮಾತನಾಡಬೇಕು. ಹಲವಾರು ಬಾರಿ ಕಡೆಯ ಗಳಿಗೆಯಲ್ಲಿ ಬಂದ ಪ್ರಾರ್ಥನೆಗಳಿಗೂ 'ಹುಂ' ಎನ್ನಬೇಕು. ರಾತ್ರಿ ಒಂಬತ್ತು, ಹತ್ತು, ಒಮ್ಮೊಮ್ಮೆ ಹನ್ನೆರಡರವರೆಗೆ ಈ ಕಾರ್ಯಕ್ರಮಗಳು. ಎಷ್ಟೋಬಾರಿ ಕಾರ್ಯಕ್ರಮವನ್ನು ವ್ಯವಸ್ಥೆ ಮಾಡಿದವರ ದಕ್ಷತೆಗಿಂತ ಉತ್ಸಾಹವೇ ಹೆಚ್ಚಾಗಿ, ಕಾರ್ಯಕ್ರಮ ಎರಡು ಗಂಟೆ ಮೂರು ಗಂಟೆ ತಡವಾಗಿ ಪ್ರಾರಂಭ. ಊಟ, ನಿದ್ರೆ ಇವುಗಳಲ್ಲಿ ಶಿಸ್ತು ಸಾಧ್ಯವಾಗದು. ಒಮ್ಮೊಮ್ಮೆ ಆಹ್ವಾನಿಸಿದವರು ಸರಿಯಾಗಿ ವ್ಯವಸ್ಥೆ ಮಾಡದೆ, ಆರೋಗ್ಯ ಚೆನ್ನಾಗಿಲ್ಲದ ಶ್ರೀಕಂಠಯ್ಯನವರಿಗೆ ತೊಂದರೆಯಾಗುತ್ತಿತ್ತು. ಆಹ್ವಾನಿಸಿದವರು ರೈಲ್ವೆಸ್ಟೇಷನಿಗೆ ಬಾರದೆ, ಯಾರನ್ನೊ ಹುಡುಕಿಕೊಂಡು ಹೋಗಿ ಊಟ ಮಾಡಿಕೊಂಡು ಮುಂದಕ್ಕೆ ಹೊರಡುವುದು, ಇಲ್ಲವೆ ಅಂಗಡಿಯಲ್ಲಿ ನಾಲ್ಕು ಬಾಳೆ ಹಣ್ಣು ತಿಂದು ಇಷ್ಟು ಹಾಲು ಕುಡಿದು ಹೊರಡುವುದು ಹೀಗಾದದ್ದೂ

ಉಂಟು. ಆದರೂ ಶ್ರೀಕಂಠಯ್ಯನವರು ಪ್ರವಾಸವನ್ನು ಕಡಿಮೆ ಮಾಡಲಿ
ಎಂದೂ ಅವರ ಮಾತು. "ಏನು ಚೆಲುವು ಕನ್ನಡ ನಾಡಿನದು, ಏನು ನ
ಕನ್ನಡ ಮಕ್ಕಳದು!"

**ಇಗೋ ಇದು ದಾರಿ**

ಬರಿಯ ಉತ್ಸಾಹ, ಆವೇಶ ಇವುಗಳಿಂದ ಕನ್ನಡದ ಬೆಳವಣಿಗೆಯಾಗ
ವುದಿಲ್ಲ ಎಂದು ಶ್ರೀಕಂಠಯ್ಯನವರಿಗೆ ಖಚಿತವಾಗಿತ್ತು. ಈ ಬೆಳವಣಿಗೆಯನ
ಸಾಧಿಸಲು ಅವರು ಬಹು ಸ್ಪಷ್ಟವಾದ ಕಾರ್ಯವಿಧಾನವನ್ನು ಗುರುತಿಸಿದ್ದರು
ಇದು ಹಲವು ವರ್ಷಗಳ ಚಿಂತನೆಯ ಫಲ. ಭಾರತ ಮಧ್ಯಯುಗದಿಂ
ಆಧುನಿಕ ಕಾಲಕ್ಕೆ ಕಾಲಿಡುವುದು ಅತ್ಯಗತ್ಯ, ಇಂತಹ ಯುಗಕ್ಕೆ ಅಗತ್ಯವಾ
ಮನೋಧರ್ಮವನ್ನು, ಕಾರ್ಯರೀತಿಯನ್ನು ಕನ್ನಡಿಗರು ಬೆಳೆಸಿಕೊಳ್ಳಬೇಕು
ತಮ್ಮ ಸಂಸ್ಕೃತಿಯ ತಾಯಿಬೇರುಗಳಿಂದ ಸಂಪರ್ಕ ಕಡಿದುಕೊಳ್ಳದೆ ಅವರ
ದೊಡ್ಡದಾಗಿ ಬೆಳೆಯಬೇಕು. ಹೊಸ ಯುಗ ಉದಯವಾಗುತ್ತಿದ್ದ ಕಾಲದಲ್ಲಿ
ಕನ್ನಡ ಹಲವು ಉದ್ದೇಶಗಳಿಗೆ ಹೊಂದಿಕೊಳ್ಳಬೇಕು, ಎಲ್ಲ ಕ್ಷೇತ್ರಗಳಲ್ಲಿ –
ಸಾಹಿತ್ಯ, ಚಿಂತನೆ, ವಿಜ್ಞಾನ, ವೃತ್ತಪತ್ರಿಕೆ ಹೀಗೆ ಹಲವಾರು ಕ್ಷೇತ್ರಗಳಲ್ಲಿ
– ಭಾಷೆಯ ಅಗತ್ಯಗಳನ್ನು ಪೂರೈಸಬೇಕು. ಇದಕ್ಕಾಗಿ ಕನ್ನಡ ಹೇಗೆ ಬೆಳೆಯ
ಬೇಕು, ಕನ್ನಡಿಗರು ಭಾಷೆಯನ್ನು ಹೇಗೆ ಬೆಳೆಸಬೇಕು ಎಂಬ ವಿಷಯದಲ್ಲಿ
ಉದಾರವಾಗಿ ದೂರದೃಷ್ಟಿಯಿಂದ ಯೋಚಿಸಿದರು ಶ್ರೀಕಂಠಯ್ಯನವರು.

ಕನ್ನಡ, ಕನ್ನಡನಾಡು ಎಂದು ಯೋಚಿಸುವುದು ಪ್ರಾಂತೀಯ ದೃಷ್ಟಿ
ಎಂಬ ಆಕ್ಷೇಪಣೆಗೆ ಶ್ರೀಕಂಠಯ್ಯನವರು ಉತ್ತರ ಹೇಳಿದ್ದಾರೆ. ಕನ್ನಡದಂತಹ
ಇಪ್ಪತ್ತು ದೇಶಭಾಷೆಗಳಿದ್ದರೂ ಒಗ್ಗಟ್ಟಿಗೆ ಕುಂದಕವಿಲ್ಲ ಎಂದರು. ಕನ್ನಡವಲ್ಲಿ
ಅತ್ಯಂತ ಅಭಿಮಾನವಿದ್ದ ಅವರು "ನಿಮ್ಮ ಕನ್ನಡದಿಂದ ನಮಗೆ ಆಗಬೇಕಾದದ್ದು
ಏನೂ ಇಲ್ಲ" ಎನ್ನುವವರ ಆಕ್ಷೇಪಣೆಗಳನ್ನು ತಾವೇ ಪಟ್ಟಿಮಾಡಿ ಹೇಳಿದರು:
"ಅವರ ಮಾತನ್ನು ನಾವು ಮನಸ್ಸಿಗೆ ತೆಗೆದುಕೊಂಡರೆ ಒಳ್ಳೆಯದೆಂದು
ತೋರುತ್ತದೆ. ಏಕೆಂದರೆ ಅದು ಬಲುಮಟ್ಟಿಗೆ ವಾಸ್ತವ. ಬಲುಮಟ್ಟಿಗೆ ನಾವು
ಅದನ್ನು ಒಪ್ಪಬೇಕಾಗುತ್ತದೆ." ಕನ್ನಡಕ್ಕೂ ಸಂಸ್ಕೃತ ಮತ್ತು ಇಂಗ್ಲಿಷಿಗೂ
ಇರಬೇಕಾದ ಸಂಬಂಧವನ್ನು ಸ್ಪಷ್ಟವಾಗಿ ತರ್ಕಬದ್ಧವಾಗಿ ನಿರೂಪಿಸುತ್ತಾರೆ.

"ಕನ್ನಡ ಭಾಷೆ ಪ್ರಬಲವಾಗುವುದಕ್ಕೆ ಸಂಸ್ಕೃತವೇ ಆಧಾರವೆಂದು ಎಲ್ಲರೂ ಒಪ್ಪುತ್ತಾರೆ." ಆದರೆ ಸಂಸ್ಕೃತ ಪಂಡಿತರು – ಅದರಲ್ಲಿಯೂ ತಮ್ಮ ಮತ ಗಳನ್ನು ಹೊಗಳಲು ಬರೆದ ಪಂಡಿತರು – ಸುಖಪ್ರಿಯರಾಗಿ, ಶೂದ್ರರಿಂದ ಜ್ಞಾನವನ್ನು ದೂರವಾಗಿಟ್ಟು, ಅಪಕಾರ ಮಾಡಿದರು. ಎಲ್ಲ ಕಾವ್ಯಗಳಿಗೂ ವಸ್ತು ಒಂದೇ, ಕಾವ್ಯರೀತಿಯೂ ಒಂದೇ. ಕವಿಸಮಯಗಳು ಸಂಪ್ರದಾಯ ಗಳು ಕೃತಿಯನ್ನು ಉಸಿರು ಕಟ್ಟಿಸುತ್ತವೆ. ವರ್ಣನೆಯಲ್ಲಿ ಉತ್ಪ್ರೇಕ್ಷೆ, ಕನ್ನಡದ ಕಾವ್ಯದ ತುಂಬಾ ಸಂಸ್ಕೃತ ಶಬ್ದಗಳು, ನಾಟಕಗಳು ವಚನಕಾವ್ಯಗಳು ಕಡಮೆ. ಆದರೆ ಹಿಂದಿನ ಸಾಹಿತ್ಯ ಸಂಪತ್ತನ್ನೆಲ್ಲ ಮೂಲೆಪಾಲು ಮಾಡುವಂತಿಲ್ಲ. ಗ್ರಂಥಗಳನ್ನೆಲ್ಲ ಶೇಖರಿಸಬೇಕು. ಎಲ್ಲವನ್ನೂ ಶೋಧಿಸಿ ಹೊಸದಾಗಿ ಲಕ್ಷಣ ಗ್ರಂಥಗಳನ್ನು ಕಾಲಕ್ಕೆ ತಕ್ಕಂತೆ ರಚಿಸಬೇಕು. ಪೂರ್ವಕಾವ್ಯಗಳಲ್ಲಿ ಉತ್ತಮ ಭಾಗಗಳನ್ನು ಆರಿಸಿ ಎಳೆಯರ ವಿದ್ಯಾಭ್ಯಾಸಕ್ಕೆ ಉಪಯೋಗಿಸಬೇಕು. ಮುಂದೆ ಒಳ್ಳೆಯ ಸಾಹಿತ್ಯಸೃಷ್ಟಿಗೆ ಸಿದ್ಧತೆ ಮಾಡಬೇಕು. ವಿದ್ಯಾವಂತ ರಿಗಾಗಿ ರಚಿಸುವ ಕೃತಿಗಳನ್ನು ಬೇಕಾದರೆ ಹಳೆಗನ್ನಡದಲ್ಲಿ ರಚಿಸಬಹುದು. ಆದರೆ ಜನಸಾಮಾನ್ಯರಿಗಾಗಿ ಬರೆಯುವಾಗ ತಿಳಿಯಾದ, ಸ್ಫುಟವಾದ ಹೊಸಗನ್ನಡದಲ್ಲಿ ಬರೆಯತಕ್ಕದ್ದು. "ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ ಬರೆಯುತಕ್ಕ ಕಾಲ ಹೋಯಿತು. ಈಗ ಹೆಂಗಸರು, ಗಂಡಸರು, ಚಿಕ್ಕವರು, ದೊಡ್ಡವರು. ಬ್ರಾಹ್ಮಣರು, ಒಕ್ಕಲಿಗರು ಅಷ್ಟರೂ ಓದುವಂತೆ ಬರೆಯ ಬೇಕು." ಸಮಾಜದ ಏಳಿಗೆಗೆ ನೆರವಾಗುವ ವಿಷಯಗಳನ್ನು ಆರಿಸಿಕೊಳ್ಳಬೇಕು. "ಲಾಭವೇ ಗ್ರಂಥಕ್ಕೆ ಗುರಿಯಲ್ಲ; ಹರ್ಷವೂ ಆಗಿರುವುದರಿಂದ ವಿನೋದವಾಗಿ ಹೊತ್ತು ಕಳೆಯುವುದಕ್ಕೆ ಕಟ್ಟುಕಥೆಗಳನ್ನೂ ಕಾದಂಬರಿಗಳನ್ನೂ ಸರಸ ಪ್ರಸಂಗಗಳನ್ನೂ ಬರೆಯಬೇಕು." ನಮ್ಮ ಹಿರಿಯರ ಬದುಕನ್ನು ತಿಳಿಸಿಕೊಡುವ ಬರಹ ಬರಬೇಕು, ಆದರೆ ಸತ್ಯಾಂಶವನ್ನು ಗುರುತಿಸಿ ಬರೆಯಬೇಕು. "ಸತ್ಯದಿಂದ ಎಂದಿಗೂ ಲೋಪವಿಲ್ಲ." ಹಿಂದೆ ಸಂಸ್ಕೃತದ ಅಭ್ಯಾಸ ಮತ್ತು ಪ್ರಾದರಿಯಿಂದ ಕನ್ನಡ ಕಾವ್ಯ ಬೆಳೆಯಿತು. ಈಗ "ಇಂಗ್ಲಿಷಿನ ಶಿಕ್ಷೆಯಲ್ಲೂ ಪ್ರೋಷಣೆಯಲ್ಲೂ ಅದನ್ನು ಬೆಳೆಸಬೇಕು. ಇಂಗ್ಲಿಷರ ಕಾವ್ಯಮಾಲೆ ಪರಮೋತ್ಕೃಷ್ಟವಾದುದ್ದು; ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್, ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು, ಇದರ

ಗುಣವನ್ನು ಕಲಿತು, ಇದರ ಐಶ್ವರ್ಯದಲ್ಲಿ ಭಾಗಿಗಳಾಗಿ, ಬೇಕಾದ ರೀತಿಯಲ್ಲಿ ಭಾಷಾಂತರದಿಂದ ಕನ್ನಡದ ಬೊಕ್ಕಸವನ್ನು ತುಂಬಿಟ್ಟರೆ, ಮುಂದೆ ಸ್ವದೇಶ ಮಾರ್ಗವೂ ವಿದೇಶಮಾರ್ಗವೂ ಕಲೆತು ಒಂದಾಗಿ, ಎರಡರಲ್ಲೂ ಒಗ್ಗದುವು ವಕ್ರವಾದುವು ಬಿಟ್ಟುಹೋಗಿ, ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ." ಸಂಸ್ಕೃತ ವಿದ್ವಾಂಸರು ಎಲ್ಲರಿಗೂ ಓದಿಕೊಳ್ಳಲು ಸಾಧ್ಯವಾಗುವಂತೆ ಅಮೂಲ್ಯವಾದ ಶ್ರುತಿ, ಸ್ಮೃತಿ, ಉಪನಿಷತ್ತುಗಳನ್ನೂ ಆಚಾರ್ಯರ ಭಾಷ್ಯಗಳನ್ನೂ ತಿಳಿಗನ್ನಡದಲ್ಲಿ ಅನುವಾದಿಸಿ ಕೊಡಬೇಕು.

ಇದು 'ಶ್ರೀ'ಯವರು ಎಪ್ಪತ್ತೆರಡು ವರ್ಷಗಳ ಹಿಂದೆ, ೧೯೧೧ ರಲ್ಲಿ, ವ್ಯಕ್ತಪಡಿಸಿದ ಅಭಿಪ್ರಾಯಗಳ ಸಂಗ್ರಹ. ಅವರ ದೂರದೃಷ್ಟಿಯನ್ನೂ ತಿಳಿಯಾದ ವಿಚಾರರೀತಿಯನ್ನೂ ಗುರುತಿಸಬೇಕಾದರೆ ನಮಗೆ ಪರಿಚಿತವಾಗಿರುವ ಆಧುನಿಕ ಕನ್ನಡ ಕವನಗಳು, ಕಥೆಗಳು, ಕಾದಂಬರಿಗಳು, ನಾಟಕಗಳು ಯಾವುವೂ ಇಲ್ಲದಿದ್ದ ಕಾಲದಲ್ಲಿ ಅವರ ವಿಚಾರವಾಹಿನಿ ಈ ದಿಕ್ಕಿನಲ್ಲಿ ಹರಿಯಿತೆಂಬುದನ್ನು ನೆನಪಿಡಬೇಕು. ೧೯೧೧ರಲ್ಲಿ ಗೋವಿಂದ ಪೈ ಅವರು ಹೀಗೆ ಹಾಗೆ ಹೊಯ್ದಾಡಿ ಕಡೆಗೆ ಪ್ರಾಸವನ್ನು ಬಿಟ್ಟು ಕವಿತೆ ಬರೆಯುವ ಧೈರ್ಯ ಮಾಡಿದರು. ೧೯೧೫ರಲ್ಲಿ ಪುಟ್ಟಣ್ಣನವರ ಕಾದಂಬರಿ 'ಮಾಡಿದ್ದುಣ್ಣೋ ಮಹರಾಯ' ಪ್ರಕಟವಾಯಿತು. ಪಂಜೆ ಮಂಗೇಶರಾಯರ ಕೆಲವು ಕಥೆಗಳು, ವ್ಯಕ್ತಿಚಿತ್ರಗಳು ಈ ಹೊತ್ತಿಗೆ ಪ್ರಕಟಕವಾಗಿದ್ದವು. ಮಾಸ್ತಿಯವರ ಕಥೆಗಳು ಈ ಶತಮಾನದ ಎರಡನೆ ದಶಕದಲ್ಲಿ ಪ್ರಕಟವಾಗಲು ಪ್ರಾರಂಭವಾಗಿ ೧೯೨೦ ರಲ್ಲಿ ಅವರ ಮೊದಲ ಸಂಗ್ರಹ ಪ್ರಕಟವಾಯಿತು. ಕೈಲಾಸಂ ಅವರ 'ಟೊಳ್ಳುಗಟ್ಟಿ' ೧೯೨೨ರಲ್ಲಿ ಪ್ರಕಟವಾಯಿತು. ಶ್ರೀರಂಗರ 'ಉದರ ವೈರಾಗ್ಯ' ೧೯೩೦ ರಲ್ಲಿ ಪ್ರದರ್ಶಿತವಾಯಿತು. ಆದ್ದರಿಂದ ೧೯೧೧ ರಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಸ್ಥಿತಿಯನ್ನು ಊಹಿಸಿಕೊಳ್ಳಬಹುದು. ನೀರಿಗಾಗಿ ಕಾಯುತ್ತಿದ್ದ ಭೂಮಿಗೆ ನೀರನ್ನು ತಂದು ಎರಡು ಬದಿಗಳ ನೆಲದಲ್ಲೂ ಬೆಳೆ ನಗುನಗುತ್ತ ಬೆಳಗುವುದನ್ನು ಸಾಧ್ಯಮಾಡಿದ ಪುಣ್ಯಪುರುಷರು ಶ್ರೀಕಂಠಯ್ಯನವರು.

ಶ್ರೀಕಂಠಯ್ಯನವರು ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಬೆಳವಣಿಗೆ

ಗಾಗಿ ಮಾಡಿದ ಸಲಹೆಗಳು ಇನ್ನೂ ಹಲವಾರು. ಶಬ್ದ ಭಂಡಾರವನ್ನು ಬೆಳೆಸುವುದಕ್ಕೆ ಸಲಹೆಗಳನ್ನು ಕೊಟ್ಟರು. ಒಂದೇ ಶಬ್ದಕ್ಕೆ ಹಲವು ರೂಪಗಳಿದ್ದಾಗ ಯಾವುದನ್ನು ಉಳಿಸಿಕೊಳ್ಳಬೇಕೆಂದು ತೀರ್ಮಾನಿಸಲು ಸೂತ್ರಗಳನ್ನು ಹೇಳಿದರು. ಬಳಕೆಯಿಂದ ಬಿಟ್ಟುಹೋಗುತ್ತಿರುವ ಹಲವು ಉಪಯುಕ್ತ ಶಬ್ದಗಳನ್ನು [ಉದಾಹರಣೆಗೆ ಆಳು (=ಮನುಷ್ಯ), ಕಡಲು, ಗೆಲವು (=ಹರ್ಷ), ತೆರಳು, ಸವಿ, ಹಲುಬು] ಉಳಿಸಿಕೊಳ್ಳಬೇಕೆಂದು ನೆನಪಿಗೆ ತಂದುಕೊಟ್ಟರು. ಭಾಷೆಗೆ ಹೊಸ ಶಬ್ದಗಳು ದೊರೆಯುವುದು ಹೇಗೆ ಎಂಬುದನ್ನು ವಿಸ್ತಾರವಾಗಿ ವಿಮರ್ಶಿಸಿದರು, ಕೆಲವು ಸೂತ್ರಗಳನ್ನು ರೂಪಿಸಿದರು. ವ್ಯಾಕರಣದಲ್ಲಿ ಯಾವುದನ್ನು ಬಿಡಬೇಕು, ಯಾವುದನ್ನು ಉಳಿಸಿಕೊಳ್ಳಬೇಕು. ಯಾವುದನ್ನು ಮಾರ್ಪಡಿಸಬೇಕು ಎಂದು ವಿವೇಚನೆ ಮಾಡಿದರು. ಹಿಂದಿನ ಕನ್ನಡ ಸಾಹಿತ್ಯದಲ್ಲಿ ಉತ್ಕೃಷ್ಟವಾದ ಕೃತಿಗಳಿವೆ, ಅವನ್ನು ಅಭ್ಯಾಸ ಮಾಡಬೇಕು. ಆದರೆ ಹಿಂದಿನದೆಲ್ಲ ಶ್ರೇಷ್ಠ ಎಂಬ ಕುರುಡು ಶ್ರದ್ಧೆಯನ್ನು ಬಿಡಬೇಕು ಎಂದು ಘೋಷಿಸಿದರು. ಕನ್ನಡ ಸಾಹಿತ್ಯದ ವಿಷಯದಲ್ಲಿ ಅತ್ಯಂತ ಕಳಕಳಿ. ಅಭಿಮಾನ ಇದ್ದ ಶ್ರೀಕಂಠಯ್ಯನವರು ಹಿಂದಿನ ಸಾಹಿತ್ಯದ ಬಹುಭಾಗದ ಮಿತಿಗಳನ್ನು ದೋಷಗಳನ್ನು ಪಟ್ಟಿಮಾಡುವುದನ್ನು ಕಂಡಾಗ ಅವರ ವಿಮರ್ಶಕ ಬುದ್ಧಿಯನ್ನು ಮೆಚ್ಚಿಕೊಳ್ಳುವಂತಾಗುತ್ತದೆ. "ಶುದ್ಧ ಕಲಾದೃಷ್ಟಿಯಿಂದ ಸಾಹಿತ್ಯ, ಕಾವ್ಯ ಎನ್ನಿಸಿಕೊಳ್ಳಬಹುದಾದ ಬರವಣಿಗೆ ನಮ್ಮ ಪೂರ್ವದ ಸಾಹಿತ್ಯದಲ್ಲಿ ಹೇರಳವಾಗಿದೆ ಎಂದು ಎಷ್ಟುಮಟ್ಟಿಗೆ ಧೈರ್ಯವಾಗಿ ಹೇಳಬಹುದು?" ಎಂದು ಪ್ರಶ್ನಿಸಿದರು. ಅದೇ ಭಾಷಣದಲ್ಲಿ ತಾವೇ ಪಂಪ, ರಾಘವಾಂಕ, ಚಿಕ್ಕದೇವರಾಜ ಒಡೆಯರು ಮೊದಲಾದ ಹಿಂದಿನವರ ಕೃತಿಗಳಿಂದ ಸಾರವತ್ತಾದ ಭಾಗಗಳನ್ನು ಆರಿಸಿ ಓದಿದರು. "ವಿಮರ್ಶೆಯ ಮೂಲಕವಾಗಿ, ನಮ್ಮ ಪೂರ್ವಸಾಹಿತ್ಯರಾಶಿಯಿಂದ ಉತ್ತಮ ಕಾವ್ಯಗಳನ್ನೂ ಕಾವ್ಯಭಾಗಗಳನ್ನೂ ಶೋಧಿಸಿ ತೆಗೆದು ಕಾವ್ಯಕೋಶಗಳನ್ನು ಸಿದ್ಧಪಡಿಸುವುದೇ ನಮ್ಮ ಪ್ರಥಮ ಕರ್ತವ್ಯವೆಂದು ತಿಳಿದಿರುತ್ತೇನೆ ... ಈ ನೂತನ ಪ್ರಪಂಚಕ್ಕೆ ಈ ನೂತನ ಸಮಾಜದ ಅಭಿಲಾಷೆಗಳು, ರುಚಿಗಳು, ಜೀವನ ವ್ಯಾಪಾರಗಳು ಇವುಗಳಿಗೆ ಅನುಕೂಲಿಸುವಂತಹ ಹೊಸ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದಲ್ಲದೆ,

ಕನ್ನಡ ಭಾಷೆಯ ಸೇವೆಗಾಗಲಿ, ಕನ್ನಡ ದೇಶದ ಏಳಿಗೆಗಾಗಲಿ ನಾವು, ಈ (ಕನ್ನಡ ಸಾಹಿತ್ಯ) ಪರಿಷತ್ತು, ಸಾಕಾದಷ್ಟು ಶ್ರದ್ಧೆಯನ್ನು ವಹಿಸಿ ಋಣವನ್ನು ತೀರಿಸಿದಂತಾಯಿತೆಂದು ನಾನು ಹೇಳಲಾರೆ" ಎಂದು ಸಾರಿದರು. ಜನಪದ ಕಾವ್ಯದ ಶ್ರೀಮಂತಿಕೆ ಮತ್ತು ಮಹತ್ವದತ್ತ ಬೆರಳು ಮಾಡಿ ತೋರಿಸಿದರು. "ಮೊದಲು ಹುಟ್ಟಿದುದು ಜನವಾಣಿ, ಅದು ಬೆಳೆದು ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು, ಕವಿವಾಣಿ ಹೂವು" ಎಂದು ವಿವರಿಸಿದರು. ಜನಪದ ಸಾಹಿತ್ಯವು ನಾಶವಾಗಲು ಬಿಡದೆ ಸಂಗ್ರಹಿಸಿ ಉಳಿಸಬೇಕೆಂದು ಎಚ್ಚರಿಸಿದರು.

**ತನುಮನಧನ ಅರ್ಪಣೆ**

ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಮುನ್ನಡೆಗೆ ಹೆದ್ದಾರಿಗಳನ್ನು ಗುರುತಿಸಿದ್ದಲ್ಲದೆ ಶ್ರೀಕಂಠಯ್ಯನವರು ಕನ್ನಡದ ಸೇವೆಯನ್ನು ಅನೇಕ ರೀತಿಗಳಲ್ಲಿ ಮಾಡಿದರು. ಅವರಿಗೂ ಕನ್ನಡ ಸಾಹಿತ್ಯ ಪರಿಷತ್ತಿಗೂ ಬಹು ವರ್ಷಗಳ ನಂಟು. ಪರಿಷತ್ತಿನ ಪರವಾಗಿ ಅವರು ಕನ್ನಡನಾಡಿನ ಮೂಲೆ ಮೂಲೆಯಲ್ಲಿ ಪ್ರವಾಸಮಾಡಿದರು. ಪರಿಷತ್ತಿನ ಧ್ಯೇಯಗಳನ್ನು ವಿವರಿಸಿದರು. ಪರಿಷತ್ತಿಗೆ ಸದಸ್ಯರಾಗಿ ಕನ್ನಡಿಗರು ಅದರ ಕೆಲಸಕ್ಕೆ ಒತ್ತಾಸೆಯಾಗಿ ನಿಲ್ಲಬೇಕೆಂದು ಪ್ರಾರ್ಥಿಸಿದರು. ೧೯೩೮ರಲ್ಲಿ ಅವರು ಪರಿಷತ್ತಿನ ಉಪಾಧ್ಯಕ್ಷರಾದರು. ಆಗ ಪರಿಷತ್ತಿನ ಹಣಕಾಸಿನ ಸ್ಥಿತಿ ಅಷ್ಟೇನೂ ತೃಪ್ತಿಕರವಾಗಿರಲಿಲ್ಲ. ಸರ್ಕಾರ ವರ್ಷಕ್ಕೆ ಮೂರು ಸಾವಿರ ರೂಪಾಯಿಗಳ ನೆರವು ನೀಡುತ್ತಿತ್ತು. ಸದಸ್ಯರ ಸಂಖ್ಯೆಯೂ ಕಡಮೆ. ಪರಿಷತ್ತಿನ ಅಚ್ಚಿನ ಕೆಲಸಕ್ಕೆ ಹೊರಗಿನ ಅಚ್ಚುಕೂಟಗಳನ್ನು ನೆಚ್ಚಿಕೊಳ್ಳಬೇಕಾಗುತ್ತಿತ್ತು, ಅವು ಕೆಲಸ ಪೂರೈಸಿ ಕೊಡಲು ಕಾಯಬೇಕಾಗುತ್ತಿತ್ತು, ಹೆಚ್ಚು ಹಣವೂ ಖರ್ಚಾಗುತ್ತಿತ್ತು. ಪರಿಷತ್ತಿಗೆ ಸ್ವಂತ ಅಚ್ಚುಕೂಟವಿದ್ದರೆ ಅನುಕೂಲ, ಹೆಚ್ಚಿನ ಪುಸ್ತಕಗಳನ್ನು ಹೊರತರಲು ಸಾಧ್ಯವಾಗುತ್ತದೆ ಎಂದು ಭಾವಿಸಿ ಶ್ರೀಕಂಠಯ್ಯನವರು ಇದಕ್ಕಾಗಿ ೧೯೩೯ರಲ್ಲಿ ಐದು ಸಾವಿರ ರೂಪಾಯಿಗಳನ್ನು ಮರು ವರ್ಷ ಒಂದು ಸಾವಿರ ರೂಪಾಯಿಗಳನ್ನು ದಾನವಾಗಿ ಕೊಟ್ಟರು. (ಆಗ ಸಾಮಾನುಗಳಿಗಿದ್ದ ಬೆಲೆಗಳು, ಈಗಿನ ಬೆಲೆಗಳು ಇವನ್ನು ಹೋಲಿಸಿದರೆ ಆಗಿನ ಆರು ಸಾವಿರ

ರೂಪಾಯಿಗಳು ಕಡೆಯಪಕ್ಷ ಇಂದಿನ ಅರವತ್ತು ಸಾವಿರ ರೂಪಾಯಿಗಳಿಗೆ ಸಮ ಎಂದು ಭಾವಿಸಬಹುದು.) ಈ ಹಣದಿಂದ ಪರಿಷತ್ತು ಪಡೆದುಕೊಂಡ ಅಚ್ಚುಕೂಟಕ್ಕೆ 'ಬಿ. ಎಂ. ಶ್ರೀ. ಅಚ್ಚುಕೂಟ' ಎಂದೇ ಹೆಸರಿಟ್ಟಿದೆ. ೧೯೪೦ರಲ್ಲಿ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬ ವಿಜೃಂಭಣೆಯಿಂದ ನಡೆಯಿತು. ಮೈಸೂರಿನ ಆಗಿನ ಮಹಾರಾಜರು ನಾಲ್ವಡಿ ಕೃಷ್ಣರಾಜ ಒಡೆಯರು ಸಮಾರಂಭಕ್ಕೆ ಬಂದಿದ್ದರು. ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ 'ಕನ್ನಡನಾಡಿನ ಚರಿತ್ರೆ' ಎಂಬ ಪುಸ್ತಕವನ್ನು ಪ್ರಕಟಿಸಲಾಯಿತು. ಇದಕ್ಕೆ ಶ್ರೀಕಂಠಯ್ಯನವರೇ ಪ್ರಧಾನ ಸಂಪಾದಕರು. ಪುಸ್ತಕ ಮೂರು ಭಾಗಗಳಲ್ಲಿದೆ. ಮೊದಲ ಭಾಗ ಕನ್ನಡ ನಾಡಿನ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯನ್ನು ನಿರೂಪಿಸುತ್ತದೆ. ಎರಡನೆಯ ಭಾಗದಲ್ಲಿ ಕನ್ನಡ ನಾಡಿನ ಧರ್ಮಗಳ ವಿವರಣೆ ಇದೆ. ಮೂರನೆಯ ಭಾಗದಲ್ಲಿ ಕನ್ನಡ ನಾಡಿನ ಕಲೆಗಳ ಚರಿತ್ರೆ ಇದೆ. ಈ ಮೂರು ಭಾಗಗಳನ್ನು ನಾಡಿನ ಮೂವರು ಹಿರಿಯ ವಿದ್ವಾಂಸರು ಬರೆದು ಕೊಟ್ಟರು. ಶ್ರೀಕಂಠಯ್ಯನವರು ಉಪಾಧ್ಯಕ್ಷರಾಗಿದ್ದಾಗಲೇ ಇನ್ನೊಂದು ಒಳ್ಳೆಯ ಗ್ರಂಥ ಪ್ರಕಟವಾಯಿತು – 'ಕನ್ನಡ ಬಾವುಟ'. ಏಳನೆಯ ಶತಮಾನ ದಿಂದ ಇಪ್ಪತ್ತನೆಯ ಶತಮಾನದವರೆಗಿನ ಕನ್ನಡ ಕಾವ್ಯಸಾಹಿತ್ಯದಲ್ಲಿ ಕೆಲವು ಉತ್ಕೃಷ್ಟ ರಚನೆಗಳನ್ನು ಸಂಕಲನದಲ್ಲಿ ಸೇರಿಸಿದೆ. ಸಂಕಲನದಲ್ಲಿ ನಾಲ್ಕು ಭಾಗಗಳಿವೆ. ಇವನ್ನು 'ತೆನೆ'ಗಳೆಂದು ಕರೆದಿದೆ. ಇವು ೧) ಶಾಸನಗಳು ೨) ಪೂರ್ವ ಸಾಹಿತ್ಯ ೩) ನಾಡ ಪದಗಳು ಮತ್ತು ೪) ಇಂದಿನ ಹೊಸ ಕವಿತೆ. ಕನ್ನಡದಲ್ಲಿ ಆವರೆಗೆ ಅಂತಹ ಪ್ರಕಟಣೆ ಬಂದಿರಲಿಲ್ಲ. ಪರಿಷತ್ತು ಆವರೆಗೆ 'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ' ಎಂಬ ತ್ರೈಮಾಸಿಕವನ್ನು ಪ್ರಕಟಿಸುತ್ತಿತ್ತು. ಇದರಲ್ಲಿ ವಿದ್ವತ್ಪೂರ್ಣ ಲೇಖನಗಳು ಪ್ರಕಟವಾಗುತ್ತಿದ್ದವು. ಪರಿಷತ್ತು ಜನತೆಯೊಂದಿಗೆ ನಿಕಟವಾದ ಸಂಪರ್ಕ ಬೆಳೆಸಬೇಕು, ಪರಿಷತ್ತಿನ ಕಾರ್ಯಕ್ರಮಗಳು, ಉದ್ದೇಶಗಳು ಮತ್ತು ಕನ್ನಡಕ್ಕೆ ಸಂಬಂಧಿಸಿದ ಚಟುವಟಿಕೆಗಳು ಇವು ಜನತೆಗೆ ಆಗಾಗ ತಿಳಿಯಬೇಕು ಎಂದು ಶ್ರೀಕಂಠಯ್ಯನವರಿಗೆ ತೋರಿತು. ಕನ್ನಡ ಜನತೆ ಮತ್ತು ಪರಿಷತ್ತಿನ ನಡುವೆ ಮತ್ತೊಂದು ಸೇತುವೆಯಾಗಿ ವಾರಪತ್ರಿಕೆ 'ಕನ್ನಡ ನುಡಿ' ೧೯೩೮ರಲ್ಲಿ ವಿಜಯದಶಮಿಯಂದು ಪ್ರಾರಂಭವಾಯಿತು. ಇದಕ್ಕೆ ಅ. ನ. ಕೃಷ್ಣರಾಯರು ಸಂಪಾದಕರಾದರು.

ಶ್ರೀಕಂಠಯ್ಯನವರ ಕಾಲದಲ್ಲಿ ಪರಿಷತ್ತು ಇಟ್ಟ ಮತ್ತೊಂದು ಮುಖ್ಯ ಹೆಜ್ಜೆ ಎಂದರೆ ಸಾಹಿತ್ಯ ಪರೀಕ್ಷೆಗಳನ್ನು ಪ್ರಾರಂಭಿಸಿದ್ದು. ನಾಡಿನ ಬೇರೆ ಬೇರೆ ಭಾಗಗಳಲ್ಲಿ ಕನ್ನಡ ಸಾಹಿತ್ಯವನ್ನು ಅಭ್ಯಾಸಮಾಡಲು ಬಯಸುವ ತರುಣತರುಣಿಯರಿಗಾಗಿ ಅಣುಗ, ಕಾವ, ಜಾಣ ಎಂಬ ಪರೀಕ್ಷೆಗಳನ್ನು ನಡೆಸಲು ವ್ಯವಸ್ಥೆ ಮಾಡಲಾಯಿತು. ಪರಿಷತ್ತಿನ ಕೆಲಸಕಾರ್ಯಗಳಲ್ಲಿ ಹೆಂಗಸರು ಇನ್ನಷ್ಟು ಭಾಗವಹಿಸಲು ಅವಕಾಶವಾಗುವಂತೆ ೧೯೩೮ ರಲ್ಲಿ ಮಹಿಳೆಯರ ಸಹಾಯಕ ಸಮಿತಿಯೊಂದನ್ನು ರಚಿಸಲಾಯಿತು.

ಶ್ರೀಕಂಠಯ್ಯನವರು ಸಾಹಿತ್ಯ ಪರಿಷತ್ತಿಗೆ ಸಲ್ಲಿಸಿದ ಸೇವೆಗೆ ಬೆಲೆ ಕಟ್ಟುವುದು ಅಸಾಧ್ಯ. ಹಲವು ವರ್ಷಗಳ ಕಾಲ ಅದರ ಆಧಾರಸ್ತಂಭಗಳಲ್ಲಿ ಅವರು ಒಬ್ಬರು. ತಮ್ಮ ಅನಾರೋಗ್ಯವನ್ನೂ ವಿರಾಮದ ಅಭಾವವನ್ನೂ ಲಕ್ಷಿಸದೆ ದುಡಿದ ಅವರು ೧೯೪೨ ರಲ್ಲಿ ಉಪಾಧ್ಯಕ್ಷಸ್ಥಾನದಿಂದ ನಿವೃತ್ತ ರಾದರು.

ಕನ್ನಡಿಗರಿಗೆ ಒಳ್ಳೆಯ ಪುಸ್ತಕಗಳು ಸುಲಭವಾದ ಬೆಲೆಯಲ್ಲಿ ದೊರೆಯ ಬೇಕು ಎಂಬುದು ಶ್ರೀಕಂಠಯ್ಯನವರ ಹಂಬಲ. ಕನ್ನಡ ಸಾಹಿತ್ಯ ಪರಿಷತ್ತಿನಿಂದ 'ಕನ್ನಡ ಬಾವುಟ' ಮತ್ತು 'ಕನ್ನಡ ನಾಡಿನ ಚರಿತ್ರೆ' ಇವನ್ನು ಪ್ರಕಟಿಸಿದ್ದು ಈ ದೃಷ್ಟಿಯಿಂದಲೇ. ಅವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣ ಸಮಿತಿಯ ಅಧ್ಯಕ್ಷರಾಗಿದ್ದರು, ಅದರ ಕನ್ನಡ ಗ್ರಂಥಮಾಲೆಯ ಪ್ರಧಾನ ಸಂಪಾದಕರೂ ಆಗಿದ್ದರು. ಈ ಮಾಲೆಯ ಪುಸ್ತಕಗಳ ಬೆಲೆ ಹನ್ನೆರಡಾಣೆ (ಈಗಿನ ಎಪ್ಪತ್ತೈದು ಪೈಸೆ). ಹಲವು ವಿಷಯಗಳ ಮೇಲೆ ವಿದ್ವಾಂಸರಿಂದ ಸೊಗಸಾದ ಪುಸ್ತಕಗಳನ್ನು ಬರೆಸಿ ಪ್ರಕಟಿಸುವ ಕೆಲಸವನ್ನು ಶ್ರೀಕಂಠಯ್ಯನವರು ಯಶಸ್ವಿಯಾಗಿ ನಿರ್ವಹಿಸಿದರು. ಇವುಗಳಲ್ಲಿ ಹಲವಕ್ಕೆ ತಾವೇ ವಿದ್ವತ್ಪೂರ್ಣ ಮುನ್ನುಡಿಗಳನ್ನು ಬರೆದರು.

ಕನ್ನಡ ಆಡಳಿತ ಭಾಷೆಯಾಗಬೇಕು, ನಿತ್ಯವ್ಯವಹಾರದಲ್ಲಿ ಇದರ ಬಳಕೆ ಹೆಚ್ಚಬೇಕು ಎಂದು ಶ್ರೀಕಂಠಯ್ಯನವರೂ ಅವರಂತೆ ಯೋಚಿಸುತ್ತಿದ್ದ ಹಲವರೂ ಶ್ರಮಿಸಿದರು. ಈ ದಿಸೆಯಲ್ಲಿ ಒಂದು ತೊಡಕು ಕನ್ನಡದ ಅಕ್ಷರ ಮಾಲೆ ಎಂದು ತೋರಿತು. ಕನ್ನಡ ಆಡಳಿತದ ಮತ್ತು ವ್ಯವಹಾರದ ಭಾಷೆ ಯಾಗಬೇಕಾದರೆ ಕನ್ನಡ ಬೆರಳಚ್ಚು ಯಂತ್ರಗಳ ಬಳಕೆ ಹೆಚ್ಚಬೇಕು. ಆದ

ಕನ್ನಡದ ದೀರ್ಘ. ಒತ್ತಕ್ಷರ ಮುಂತಾದುವನ್ನು ಬೆರಳಚ್ಚು ಯಂತ್ರಕ್ಕೆ ಅಳವಡಿಸುವುದು ಕಷ್ಟ. ಲಿಪಿಯನ್ನು ಸರಳಗೊಳಿಸುವ ಸಾಧ್ಯತೆಯನ್ನು ಪರಿಶೀಲಿಸಲು ಕನ್ನಡ ಸಾಹಿತ್ಯ ಪರಿಷತ್ತು ಒಂದು ಸಮಿತಿಯನ್ನು ಏರ್ಪಡಿಸಿತು. ಸಮಿತಿ ಕೆಲವು ಸಲಹೆಗಳನ್ನು ಮಾಡಿತು. 'ಶ್ರೀ'ಯವರು ಇವನ್ನು ರೂಢಿಗೆ ತಂದು ಜನ ಅವುಗಳ ವಿಷಯ ನಿರ್ಧರಿಸಬೇಕೆಂದು ಶ್ರಮಿಸಿದರು. ಅವರೇ ಹೇಳಿದಂತೆ ಮುಖ್ಯವಾದ ಮಾರ್ಪಾಟುಗಳು ಮೂರು : ೧) ದೀರ್ಘ ಚಿಹ್ನೆಯನ್ನು ಎಲ್ಲ ಕಡೆಯೂ ಒಂದೇ ರೀತಿ ಬರೆಯುವುದು. (ಉದಾಹರಣೆ ಆ – ಅೀ : ಬಾ – ಬೀ ; ಕೂ – ಕುೀ ) ೨) ಒತ್ತಕ್ಷರಗಳನ್ನು ಬಿಡಿಸಿ ಪಕ್ಕದಲ್ಲಿ ಬರೆಯುವುದು (ಕನ್ನಡ – ಕನ್‌ನಡ ; ಶ್ರೀ – ಶ್‌ರೀ) ೩) ಎಲ್ಲಾ ಮಹಾಪ್ರಾಣ ಚಿಹ್ನೆಗಳನ್ನೂ ಅಲ್ಪಪ್ರಾಣಗಳ ಹೊಕ್ಕಳು ಸೀಳಿಯೆ ಮಾಡಿಕೊಳ್ಳುವುದು (ಫ – ಫ಼ : ಭ – ಭ). ಇವನ್ನು ಅನುಸರಿಸಿ ಅವರ 'ಕನ್ನಡ ಬಾವುಟ' ಕವನದ ಮೊದಲ ಮೂರು ಪಂಕ್ತಿಗಳನ್ನು ಕೆಳಗೆ ತೋರಿಸಿದೆ :

**ಏರಿಸಿ, ಹೇರಿಸಿ, ಕನ್‌ನಡದ ಬೀವುಟ !**
**ಓಹೊ ಕನ್‌ನಡ ನೀಡು, ಅೀಹ ಕನ್‌ನಡ ನುಡಿ !**
**ಹೇರಿಸಿ, ತೋರಿಸಿ ಕೆಚ್‌ಚೆದೆಯ ಬೀವುಟ !**

**ಕವಿಗಳ ಕವಿ**

ಶ್ರೀಕಂಠಯ್ಯನವರು ಕನ್ನಡಕ್ಕೆ ಮಾಡಿದ ಇನ್ನೊಂದು ಉಪಕಾರ ಅಳತೆಗೆ, ತೂಕಕ್ಕೆ, ಎಣಿಕೆಗೆ ಸಿಕ್ಕದ್ದು. ಅವರಿಂದ ಸ್ಫೂರ್ತಿ ಪಡೆದವರು, ಮಾರ್ಗದರ್ಶನ ಪಡೆದ ತರುಣ ಬರಹಗಾರರು ಎಷ್ಟು ಮಂದಿಯೋ ! ಇಂಗ್ಲಿಷ್ ಪ್ರೊಫೆಸರಾಗಿ ಹೆಸರು ಗಳಿಸಿದ್ದ ಅವರು ಕನ್ನಡದಲ್ಲಿ ಸಾಹಿತ್ಯರಚನೆ ಮಾಡಿದುದೇ ಆ ದಿನಗಳಲ್ಲಿ ಎಷ್ಟೋ ಬರಹಗಾರರಿಗೆ ಧೈರ್ಯವನ್ನೂ ಸ್ಫೂರ್ತಿಯನ್ನೂ ನೀಡಿತು. ಆಧುನಿಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವ ಮಾಸ್ತಿ ವೆಂಕಟೇಶ ಅಯ್ಯಂಗಾರ್. ಕೆ. ವಿ. ಪುಟ್ಟಪ್ಪ. ಎಸ್. ವಿ. ರಂಗಣ್ಣ, ವಿ. ಸೀತಾರಾಮಯ್ಯ, ಎ.ಎನ್. ಮೂರ್ತಿರಾವ್. ತೀ. ನಂ. ಶ್ರೀಕಂಠಯ್ಯ, ಕೆ. ವಿ. ರಾಘವಾಚಾರ್, ಎಲ್. ಗುಂಡಪ್ಪ, ಡಿ. ಎಲ್. ನರಸಿಂಹಾಚಾರ್, ಜಿ. ಪಿ. ರಾಜರತ್ನಂ ಮೊದಲಾದವರೆಲ್ಲ ಶ್ರೀಕಂಠಯ್ಯನವರ ವಿದ್ಯಾರ್ಥಿಗಳು.

ಅವರು ಸಾಹಿತ್ಯವನ್ನು ಪಾಠ ಹೇಳುವ ರೀತಿಯೇ ಕೃತಿಯ ಸಾರವನ್ನು ಕಣ್ಣಮುಂದಿಡುತ್ತಿತ್ತು; ಸೃಜನ ಸಾಹಿತಿ ಭಾಷೆಯನ್ನೂ ಛಂದಸ್ಸನ್ನೂ ಬಳಸುವ ರೀತಿಯನ್ನು ಅವರು ಮನಮುಟ್ಟುವಂತೆ ವಿವರಿಸುತ್ತಿದ್ದರು. ಅನೇಕ ಮಂದಿ ಕಿರಿಯರ ಕೃತಿಗಳಿಗೆ ಮುನ್ನುಡಿ ಬರೆದು ಪ್ರೋತ್ಸಾಹಿಸಿದರು. ಕನ್ನಡ ನಾಡಿನಲ್ಲಿ ಹೊಸಯುಗದ ಉದಯವಾಗುತ್ತಿದ್ದಾಗ ಸಾಹಿತ್ಯದ ಭಂಡಾರವನ್ನು ಶ್ರೀಮಂತಗೊಳಿಸಬಲ್ಲ ಹಲವು ಪ್ರತಿಭೆಗಳಿಗೆ ಆತ್ಮವಿಶ್ವಾಸವನ್ನು ತುಂಬಿದ ಪುಣ್ಯಪುರುಷರು ಶ್ರೀಕಂಠಯ್ಯನವರು. ಹಲವು ಪ್ರತಿಭೆಗಳು ಗರಿಬಿಚ್ಚಿ ಸ್ವತಂತ್ರವಾಗಿ ವಿಶ್ವಾಸದಿಂದ ಹಾರಾಡಲು ನೆರವಾದವರು ಶ್ರೀಕಂಠಯ್ಯನವರು. ಈ ದೃಷ್ಟಿಯಿಂದ ಅವರು 'ಕವಿಗಳ ಕವಿ'.

— ೩ —

**'ಇಂಗ್ಲಿಷ್ ಗೀತಗಳು'**

'ಶ್ರೀ' ಅವರ ಪ್ರತಿಭೆ ಕನ್ನಡಕ್ಕೆ ಕೊಡಬಹುದಾಗಿದ್ದ ಬೆಳೆ ವಿಪುಲ. ಅವರು ಬರೆದದ್ದು ಪ್ರಮಾಣದಲ್ಲಿ ಕಡಮೆ. ಗುಣಮಟ್ಟದಲ್ಲಿ ಶ್ರೇಷ್ಠ.

ಇಂಗ್ಲಿಷ್ ಸಾಹಿತ್ಯದ ಅಭ್ಯಾಸಮಾಡಿದವರು ತಮ್ಮ ಶ್ರಮದ ಫಲವನ್ನು ಕನ್ನಡಕ್ಕೆ ಧಾರೆ ಎರೆಯಬೇಕು ಎಂಬುದು 'ಶ್ರೀ' ಅವರ ಹಂಬಲ. ಇದನ್ನು ಉಜ್ವಲವಾಗಿ ಮಾಡಿತೋರಿಸಿದವರು ಅವರು. ಇಂಗ್ಲಿಷ್ ಸಾಹಿತ್ಯ ಹದಿನೈದನೆಯ ಶತಮಾನದಲ್ಲಿ ಬರಡಾಗಿದ್ದಾಗ ಯೂರೋಪಿನ ಕೆಲವು ಸಾಹಿತ್ಯಗಳ ನೀರನ್ನು ಬಳಸಿಕೊಂಡು ಸಮೃದ್ಧ ಬೆಳೆಯನ್ನು ಬೆಳೆಯಿತು; ನೀರು ಹೊರಗಿನದಾದರೂ ನೆಲದ ಸತ್ವವು ಬೆಳೆಯನ್ನು ಆ ನೆಲದ ಪುಣ್ಯವನ್ನಾಗಿಯೆ ಉಳಿಸಿತು. ಹಾಗೆಯೇ ಕನ್ನಡವು ಇಂಗ್ಲಿಷ್ ಸಾಹಿತ್ಯದಿಂದ ನೆರವನ್ನು ಪಡೆಯಬೇಕು ಎಂಬುದು ಅವರ ಅಭಿಪ್ರಾಯ.

ಇಂಗ್ಲಿಷಿನಿಂದ 'ಶ್ರೀ' ಅವರು ಕನ್ನಡಕ್ಕೆ ಅನುವಾದಿಸಿದ ಮೂರು ಕವನಗಳು ೧೯೧೯ ರಲ್ಲಿ 'ವಿದ್ಯಾದಾಯಿನಿ' ಪತ್ರಿಕೆಯಲ್ಲಿ ಪ್ರಕಟವಾದವು. (ಇವನ್ನು 'ಶ್ರೀ' ಅವರು ಹಲವು ವರ್ಷಗಳ ಮೊದಲೇ ಅನುವಾದಿಸಿದ್ದರು.) ೧೯೨೧ ರಲ್ಲಿ ಹನ್ನೆರಡು ಅನುವಾದಗಳು ಪ್ರಕಟವಾದವು. ೧೯೨೪ ರಲ್ಲಿ ಇನ್ನೂ ಇಪ್ಪತ್ತನಾಲ್ಕು ಪ್ರಕಟವಾದವು. ಈ ಎಲ್ಲ ಅನುವಾದಗಳ ಸಂಗ್ರಹ ೧೯೨೬ ರಲ್ಲಿ 'ಇಂಗ್ಲಿಷ್ ಗೀತಗಳು' ಎಂಬ ಹೆಸರಿನಿಂದ ಪ್ರಕಟವಾಯಿತು.

'ಇಂಗ್ಲಿಷ್ ಗೀತಗಳು' ಸಂಗ್ರಹವು ಕಾವ್ಯವನ್ನು ಬರೆಯಬೇಕೆಂದು ಬಯಸುತ್ತಿದ್ದವರಿಗೂ ಕಾವ್ಯವನ್ನು ಓದುವವರಿಗೂ ಹೊಸ ಲೋಕವನ್ನು ತೆರೆದಿಟ್ಟಿತು. ಈಗ ಎಂಬತ್ತಮೂರು ವರ್ಷ ವಯಸ್ಸಿನ ಹಿರಿಯರಾದ ಎ. ಎನ್. ಮೂರ್ತಿರಾಯರು ಹೇಳುತ್ತಾರೆ: "ಈ ಶತಮಾನದ ಎರಡನೆ ದಶಕದಲ್ಲಿ ವಿದ್ಯಾವಂತ ಕನ್ನಡಿಗರಿಗೆ ತೀವ್ರ ರೋಮಾಂಚನವನ್ನುಂಟು ಮಾಡುವ ಎರಡು ಅನುಭವಗಳು ಲಭ್ಯವಾದವು – ಈ ಇಂಗ್ಲಿಷ್ ಭಾವಗೀತೆಗಳನ್ನು ಓದುವುದು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಸಣ್ಣ ಕತೆಗಳನ್ನು ಓದುವುದು."

ಅವರೆಗಿನ ಕನ್ನಡ ಓದುಗರಿಗೆ ಲಭ್ಯವಿದ್ದ ಸಾಹಿತ್ಯ ಬಹುಮಟ್ಟಿಗೆ ದೇವತೆಗಳ, ಸಂತರ, ಮಹಾನುಭಾವರ ಜೀವನಗಳನ್ನು ಕುರಿತದ್ದು, ಇಲ್ಲವೇ ಶಿವಶರಣರಂತೆ, ದಾಸರಂತೆ ಭಕ್ತರು ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದ್ದು, ಸಮಕಾಲೀನ ಸಮಾಜವನ್ನು ತಿದ್ದಲು ಬಳಸಿಕೊಂಡಿದ್ದು, ಒಟ್ಟಿನಲ್ಲಿ ಧಾರ್ಮಿಕ, ಪರಂಪರಾಗತವಾಗಿ ಬಂದ ಮೌಲ್ಯಗಳನ್ನು ಜನತೆಯ ಮನಸ್ಸಿಗೆ, ಹೃದಯಕ್ಕೆ ಮುಟ್ಟಿಸುವ ಸಾಧನ. ಇಲ್ಲಿ ಭಕ್ತಿಯನ್ನುಳಿದು ವೈಯಕ್ತಿಕ ಭಾವಗಳಿಗೆ ಅಭಿವ್ಯಕ್ತಿ ನೀಡುವ ಪ್ರಯತ್ನವಿಲ್ಲ. ಸಾಮಾನ್ಯರೆನಿಸಿದ ಗಂಡಸು, ಹೆಂಗಸು ತಮ್ಮ ಒಲವುಗಳು, ಬಯಕೆಗಳು, ಅನುರಾಗ, ಮಾತೃವಾತ್ಸಲ್ಯ ಇವುಗಳ ಅಭಿವ್ಯಕ್ತಿಗೆ ಜನಪದ ಸಾಹಿತ್ಯಕ್ಕೆ ತಿರುಗಬೇಕಾಗಿತ್ತು. ಸಾಮಾನ್ಯವಾಗಿ ಷಟ್ಪದಿ, ಸ್ವಲ್ಪಮಟ್ಟಿಗೆ ಸಾಂಗತ್ಯ ಮತ್ತು ತ್ರಿಪದಿ ಇವು ಜನ ಓದುತ್ತಿದ್ದ, ಕೇಳುತ್ತಿದ್ದ ಸಾಹಿತ್ಯದ ಛಂದಸ್ಸುಗಳು. ಇವುಗಳಿಗೆ ಹೊರತಾದವು ವಚನ ಸಾಹಿತ್ಯ, ದಾಸರ ಕೀರ್ತನೆಗಳು, ಚಂಪೂ ಕಾವ್ಯಗಳು.

ಇಂತಹ ಸಾಹಿತ್ಯಕ್ಕೆ ಹೊಂದಿಕೊಂಡಿದ್ದ ಓದುಗರೆನ್ನು 'ಇಂಗ್ಲಿಷ್ ಗೀತ'ಗಳಲ್ಲಿ ಇಂತಹ ಪಂಕ್ತಿಗಳು ಎದಿರುಗೊಂಡವು:

**'ವಸಂತ ಬಂದ, ಋತುಗಳ ರಾಜ ತಾ ಬಂದ,**
**ಚಿಗುರನು ತಂದ, ಹೆಣ್ಗಳ ಕುಣಿಸುತ ನಿಂದ.'**

**'ಆರು ನೀನೆಲೆ ಹರುಷಮೂರುತಿ ?**
**ಹಕ್ಕಿಯೆಂಬರೆ ನಿನ್ನನು !**
**ಶೋರಿ ದಿವಿಜರು ಸುಳಿವ ಬಳಿ, ಸಂಖ**

ಪುಕ್ಕಿಬಹ ನಿನ್ನೆದೆಯುನು
ಹಾರಿ ನೆನೆಯುದ ಕಲೆಯು ಕುಶಲದ ಭೂರಿಗಾನದೊಳೆರೆಯುಪೆ!'

'ಕಾಳೆ, ಹರೆ, ಕೊಂಬುಗಳ
ಏಳಿ ಮೊಳಗಿ ಏಳಿ.
ನಾಡುಗಳ ಕುಳಗಳನು
ಕೂಡಿಕೊಳ ಹೇಳಿ.'

'ನನ್ನ ಪ್ರೇಮದ ಹುಡುಗಿ ತಾವರೆಯ ಹೊಸ ಕೆಂಪು,
ತಾವರೆಯ ಹೊಸ ಅರಳ ಹೊಳೆವ ಕೆಂಪು.'

'ಹೆದರುವೆನು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ
ಹೆದರದಿರು ನೀನು ನನಗೆ.'

'ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈ ಹಿಡಿದು ನಡೆಸೆನ್ನನು.'

ರಾಮ-ಸೀತೆ, ಪಾಂಡವರು, ನಳ-ದಮಯಂತಿ, ಶಿವ-ಗಿರಿಜೆಯರ ಕಥೆಗಳನ್ನು ಓದುತ್ತಿದ್ದ ವಾಚಕರಿಗೆ ಇಲ್ಲಿ ಕಂಡ ಕಥೆಗಳೇ ಬೇರೆ –

'ಬೇಟೆಗಾರ ಬಂದ ಮಾದ,
ಹಹ್ಹ! ಏನು ಬೇಟವೋ!'

'ಅನಾಥೆ ಇವಳಿನ್ನೊಬ್ಬ
ಳೀ ಜನ್ಮ ರೋಸಿ,
ಬೇನೆಯನು ತಾಳದೆಯೆ
ಮುಳುಗಿದಳು ಹೊಳೆಗೆ.'

'ಪಡುವ ದಿಬ್ಬದ ಗೌಡನೊಬ್ಬನು
ಬಿಡದೆ ತೊರೆಯನ ಕೂಗಿಕೊಂಡನು.'

ಕನ್ನಡ ಓದುಗರಿಗೆ ತಮ್ಮ ಮುಂದೆ ಹೊಸದೊಂದು ಲೋಕವೇ ತೆರೆದುಕೊಂಡಂತೆ ರೋಮಾಂಚನವಾದದ್ದರಲ್ಲಿ ಆಶ್ಚರ್ಯವೇನು ?

'ಶ್ರೀ'ಯವರು 'ಇಂಗ್ಲಿಷ್ ಗೀತಗಳ'ಲ್ಲಿ ಇಂಗ್ಲಿಷಿನಿಂದ ಕನ್ನಡಕ್ಕೆ

ಅರುವತ್ತು ಕವನಗಳನ್ನು ಅನುವಾದಿಸಿದ್ದಾರೆ. (ಅಗತ್ಯ ಕಂಡ ಕಡೆ ಇಲ್ಲಿನ ಜೀವನಕ್ಕೆ ಹೊಂದಿಕೊಳ್ಳುವಂತೆ ಸಣ್ಣಪುಟ್ಟ ಮಾರ್ಪಾಡುಗಳನ್ನು ಮಾಡಿ ಕೊಂಡಿದ್ದಾರೆ.) ಅವರು ತಮ್ಮ 'ಅರಿಕೆ'ಯಲ್ಲಿ ಹೀಗೆ ಹೇಳಿದ್ದಾರೆ: "ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ ಇಂಗ್ಲಿಷ್ ಕಾವ್ಯಮಾಲೆಯಿಂದ ನಾಯಕರತ್ನಗಳೆಂದು ಆದುಕೊಂಡವಲ್ಲ. ಉತ್ತಮರಾದ ಕವಿಗಳು ಎಲ್ಲರೂ ಇಲ್ಲಿ ಇಲ್ಲ. ಆಗಾಗ್ಗೆ ಓದುತ್ತಿರುವಾಗ ನನ್ನ ಮನಸ್ಸಿಗೊಪ್ಪಿ, ನನ್ನ ಕೈಮೀರದುದಾಗಿ ಕಂಡು ಬಂದ ಗೀತೆಗಳಿವು. ಇಂಗ್ಲಿಷ್ ಕವಿಗಳು ಶೃಂಗಾರ ರಸವನ್ನು ಹೇಗೆ ಗಂಭೀರ ವಾಗಿಯೂ ಸೂಕ್ಷ್ಮವಾಗಿಯೂ ಸ್ವಾಭಾವಿಕವಾಗಿಯೂ ತೋರಿಸುವರೆಂಬು ದನ್ನು ತಿಳಿಸುವುದಕ್ಕಾಗಿ ಆ ಬಗೆಯ ಗೀತೆಗಳು ಕೊಂಚ ಹೆಚ್ಚಾಗಿ ಬಂದಿವೆ." ಷೇಕ್ಸ್‌ಪಿಯರ್, ಬರ್ನ್ಸ್, ವರ್ಡ್ಸ್‌ವರ್ತ್, ಷೆಲಿ ಮೊದಲಾದ ಉತ್ತಮ ಕವಿಗಳ ಕೆಲವು ಕವನಗಳು ಇಲ್ಲಿವೆ. ಇಂದು ಈ ಅನುವಾದಗಳನ್ನು ಸೂಕ್ಷ್ಮವಾಗಿ ಅಭ್ಯಾಸಮಾಡುವವರು ನ್ಯಾಯವಾಗಿಯೇ ಕೆಲವೆಡೆ ಆಕ್ಷೇಪಿಸಬಹುದು. ಮದುವೆ ಇಲ್ಲದೆ ಗರ್ಭಿಣಿಯಾಗಿ, ನಂಬಿದವನು ಕೈ ಬಿಟ್ಟಾಗ ಆತ್ಮಹತ್ಯೆ ಮಾಡಿಕೊಂಡ ಹೆಣ್ಣನ್ನು ಕುರಿತ ಕವನ 'ದುಃಖಸೇತು'. (ಪ್ರಾಯಶಃ. ಕುಂತಿಯಂತಹ ರಾಜಮನೆತನದವಳನ್ನು ಬಿಟ್ಟು ಸಾಮಾನ್ಯ ಹೆಣ್ಣೊಂದು ಇಂತಹ ದುಃಖಕ್ಕೆ ಗುರಿಯಾದಾಗ ಅನುಕಂಪ ಸೂಚಿಸುವ ಬರಹ ಕನ್ನಡದಲ್ಲಿ ಇದೇ ಮೊದಲನೆಯದಿರಬಹುದು.) ಇದರಲ್ಲಿ,

**ನಿರಿಹಿಡಿದು, ನಡುವೇರಿ,**
**ತೊದಲುಮಾತನು ಬೀರಿ**
**ಕೊರಗ ನಗಿಸಲು ಬಲ್ಲ**
**ಮಗುವಿಲ್ಲವೇನೋ !**

ಎಂಬ ಪಂಕ್ತಿಗಳಿಗೆ ಮೂಲದಲ್ಲಿ ಆಧಾರವಿಲ್ಲ. ಇವು ಸೇರಿದ್ದರಿಂದ ಕವನಕ್ಕೆ ಊನವಾಯಿತು ಎನಿಸುತ್ತದೆ.

**ನನ್ನ ಪ್ರೇಮದ ಹುಡುಗಿ ತಾವರೆಯ ಹೊಸ ಕೆಂಪು**
**ತಾವರೆಯು ಹೊಸ ಅರಳ ಹೊಳೆವ ಕೆಂಪು**

ಎಂಬ ಪಂಕ್ತಿಗಳನ್ನು ಓದಿದಾಗ 'ಸುಂದರವಾಗಿವೆ' ಎನ್ನಿಸಿದರೂ ಮೂಲ ಕವನದ ಪಂಕ್ತಿಗಳಿಗೆ ಹೋಲಿಸಿದಾಗ ಸ್ವಲ್ಪ ಕಳೆಗುಂದಿವೆ ಎನ್ನಿಸುತ್ತದೆ.

ಆದರೂ 'ಅಡವಿಮರದಡಿಯಲ್ಲಿ', 'ವಸಂತ', 'ಮುದ್ದಿನ ಕುರಿಮರಿ', 'ರಾವುತರ ದಾಳಿ', 'ಮಾದ, ಮಾದಿ', 'ನನ್ನ ಪ್ರೇಮದ ಹುಡುಗಿ' ಇಂತಹ ಕವನಗಳು, ಇವನ್ನು ಮೀರಿಸುವಂತೆ 'ದುಃಖಸೇತು', 'ಬಾನಾಡಿ' (ಇದರಲ್ಲಿ ಕೆಲವು ಅಷ್ಟು ತೃಪ್ತಿಕೊಡದ ಪಂಕ್ತಿಗಳಿವೆ), 'ಬಿಂಕದ ಸಿಂಗಾರಿ', 'ಕನಕಾಂಗಿ', 'ಜೋಳ ಕನ್ನೆಯರು', 'ಕರುಣಾಳು ಬಾ ಬೆಳಕೆ' – ಇವು ಅನುವಾದಗಳೆಂದೇ ತೋರುವುದಿಲ್ಲ, ಕವಿಯ ಮನಸ್ಸಿನಲ್ಲಿ ಕನ್ನಡದಲ್ಲಿ ರೂಪಪಡೆದ ಅನುಭವ ಗಳೆನ್ನಿಸುತ್ತವೆ.

'ಶ್ರೀ' ಅವರಿಗೆ ಮೊದಲೇ ಎಸ್. ಜಿ. ನರಸಿಂಹಾಚಾರ್ಯ, ಹಟ್ಟಂಗಡಿ ನಾರಾಯಣ ರಾವ್ ಮೊದಲಾದ ಹಲವರು ಇಂಗ್ಲಿಷಿನಿಂದ ಕನ್ನಡಕ್ಕೆ ಕವನ ಗಳನ್ನು ಅನುವಾದಿಸಿದ್ದರು. 'ಶ್ರೀ' ಅವರು ಹೊಸ ಭಾವ, ಹೊಸ ಮನೋ ಧರ್ಮಗಳಿಗೆ ಅನುಗುಣವಾಗಿ ಹೊಸ ಶೈಲಿ ಮತ್ತು ಹೊಸ ಛಂದಸ್ಸು ಅಗತ್ಯ ಎಂಬುದನ್ನು ಗುರುತಿಸಿದ್ದು ದೊಡ್ಡ ಸಂಗತಿ. ಅನುವಾದ ಮಾಡುವವರಿಗೆ ಹೊಸ ದಾರಿಯನ್ನು ನಿರ್ಮಿಸಿಕೊಟ್ಟರು. 'ಶ್ರೀ' ತಮ್ಮ ಸಾರ್ಥಕ ಪ್ರಯೋಗ ಗಳಿಂದ ಹಿಂದಿನ ಷಟ್ಪದಿ, ಕಂದ, ವೃತ್ತಗಳನ್ನು ಬಹುಮಟ್ಟಿಗೆ ಬಿಟ್ಟು, ಹೊಸ ಛಂದಸ್ಸಿನ ಪ್ರಯೋಗಗಳನ್ನು ಮಾಡಿದರು. ಈ ಸಂಕಲನದಲ್ಲಿ ಹೊಸಗನ್ನಡದ ಮಾತ್ರಾಛಂದಸ್ಸಿಗೆ ತಳಹದಿಯನ್ನು ಹಾಕಿದರು. ಛಂದಸ್ಸಿನಲ್ಲಿ ಹೊಸ ಪ್ರಯೋಗಗಳನ್ನು ಮಾಡಲು ತರುಣಕವಿಗಳಿಗೆ ಧೈರ್ಯ ತಂದು ಕೊಟ್ಟರು, ಇಂತಹ ಪ್ರಯೋಗಗಳಿಗೆ ಅಗತ್ಯವಾದ ವಾತಾವರಣವನ್ನು ನಿರ್ಮಿಸಿದರು. ಹೊಸಗನ್ನಡದ ಕಾವ್ಯಭಾಷೆಯನ್ನು ರೂಪಿಸುವ ಕೆಲಸವೂ ಇಲ್ಲಿ ಸ್ಪಷ್ಟವಾಗಿ ಪ್ರಾರಂಭವಾಯಿತು ಎನ್ನಬಹುದು. 'ಇಂಗ್ಲಿಷ್ ಗೀತಗಳ' ಒಂದು ಬಹು ದೊಡ್ಡ ಸಾಧನೆ ಎಂದರೆ ಕಾವ್ಯವನ್ನು ಶ್ರೀಸಾಮಾನ್ಯನ ಜೀವನಕ್ಕೆ ಹತ್ತಿರ ತಂದದ್ದು. ಈ ಕಾವ್ಯದಲ್ಲಿ ತನ್ನ ಹಂಬಲ, ಸುಖದುಃಖ, ತನ್ನ ಪ್ರೇಮದ ಉತ್ಸಾಹ ನಲವು, ನಿರಾಸೆಯ ಸಂಕಟ ಇವು ಮಿಡಿಯುವ ಅನುಭವ ವಾಯಿತು ಅವನಿಗೆ. ಕಾವ್ಯವು ಪ್ರಿಯೆಯಂತೆ ಪ್ರಿಯವಾಗಿ ಉಪದೇಶ ಮಾಡುವ ಗುರಿಯನ್ನು ಸಾಧಿಸದೆ, ಸವಿಯಾಗಿ ಮನಸ್ಸನ್ನು ತಿದ್ದುವಷ್ಟಕ್ಕೆ ನಿಲ್ಲದೆ, ಹೃದಯದ ನೂರು ಭಾವನೆಗಳಿಗೆ ರೂಪ ಕೊಟ್ಟಿತು. ಕನ್ನಡದಲ್ಲಿ ಆಧುನಿಕ ಭಾವಗೀತೆಯ ಉದಯವಾಯಿತು.

**ಸ್ವತಂತ್ರ ಕವನಗಳು**

'ಶ್ರೀ' ಅವರು ಸಾಹಿತ್ಯದಲ್ಲಿ ಮಾಡಿದ ಇನ್ನೊಂದು ದೊಡ್ಡ ಕೆಲಸವೆಂದರೆ ಪಾಶ್ಚಾತ್ಯ ಸಾಹಿತ್ಯದಿಂದ ಹಲವು ಪ್ರಕಾರಗಳನ್ನು ಕನ್ನಡಕ್ಕೆ ತಂದು ಕೊಟ್ಟದ್ದು. ಭಾವಗೀತೆಯಲ್ಲಿ ಹಲವು ವಿಧಗಳಿವೆ. 'ಶ್ರೀ' ಅವರು ಶೋಕಗೀತೆಗಳನ್ನೂ ಪ್ರಗಾಥಗಳನ್ನೂ ಬರೆದರು. (ಶೋಕಗೀತೆ ಯಾರಾದರೂ ನಿಧನರಾದಾಗ ಕವಿಯ ದುಃಖವನ್ನೂ ಚಿಂತನೆಯನ್ನೂ ವ್ಯಕ್ತಪಡಿಸುವ ಕವನ.) 'ಪ್ರಗಾಥ' ಸಾಮಾನ್ಯ ಭಾವಗೀತೆಗಿಂತ ದೀರ್ಘವಾದದ್ದು. ಇದರ ವಸ್ತು ಗಂಭೀರ, ಧ್ವನಿ ಗಂಭೀರ, ಶೈಲಿ ಗಂಭೀರ. (ಇದರ ರಚನೆ ಭಾವಗೀತೆಯ ರಚನೆಗಿಂತ ಸಂಕೀರ್ಣ.) ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ ಪಟ್ಟಾಭಿಷೇಕದ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ 'ಶ್ರೀ' ಅವರು 'ಶ್ರೀಕೃಷ್ಣರಾಜ ರಜತೋತ್ಸವ ಪ್ರಗಾಥ'ವನ್ನು ಬರೆದರು ; ಅವರು ದಿವಂಗತರಾದಾಗ 'ಬಾನ್ ಕೊಂಡ ಕೃಷ್ಣನ್' ಎಂಬ ಶೋಕಗೀತೆಯನ್ನು ಬರೆದರು. ಅವರ ಅತ್ಯುತ್ತಮ ಕೃತಿ 'ಅಶ್ವತ್ಥಾಮನ್'. ಇದು ಮತ್ತು ಅವರೇ ಅನುವಾದಿಸಿದ ಗ್ರೀಕ್ ನಾಟಕ 'ಪಾರಸಿಕರು' ಕನ್ನಡಕ್ಕೆ ಪ್ರಾಚೀನ ಗ್ರೀಕ್ ಗಂಭೀರ (ಅಥವಾ ದುರಂತ ಅಥವಾ ರುದ್ರ) ನಾಟಕದ ಮಾದರಿಯ ನಾಟಕವನ್ನು ತಂದು ಕೊಟ್ಟವು. ಈ ಬಗೆಯ ನಾಟಕದ ನಾಯಕ ಅಸಾಧಾರಣ ವ್ಯಕ್ತಿ. ರಾಜ್ಯದಲ್ಲಿ ಅಥವಾ ಅವನ ಸಮುದಾಯದಲ್ಲಿ ಅವನದು ಬಹು ಉನ್ನತ ಸ್ಥಾನ ಮಾತ್ರವಲ್ಲ, ಅವನ ಗುಣಗಳಿಂದಲೋ ಜನ್ಮದತ್ತ ಶಕ್ತಿಯಿಂದಲೋ (ಅಥವಾ ಎರಡರ ಸಮ್ಮಿಳನದಿಂದಲೋ) ಅವನು ಇತರರನ್ನು ಮೀರಿಸಬಲ್ಲವನು. ಇವನ ಸೋಲು, ಪತನ ಇವು ನಾಟಕದ ವಸ್ತು. ಗಂಭೀರ ನಾಟಕದಲ್ಲಿ ವಿಜಯ, ಅಭ್ಯುದಯ ಇಲ್ಲವೇ ಇಲ್ಲ ಎಂದಲ್ಲ. ಆದರೆ ಇವನ್ನು ಮೆಟ್ಟಿ ನಿಲ್ಲುವ ನೋವು, ಸೋಲುಗಳನ್ನು ಕಾಣುತ್ತೇವೆ. (ನಾಯಕ ಸಾವಿಗೆ ಗುರಿಯಾಗಲೇಬೇಕು ಎಂದೇನೂ ಇಲ್ಲ.) ಈ ನೋವು, ಸಾವುಗಳು ನಾವು ಬದುಕಿನ ಅರ್ಥ ಮತ್ತು ವಿನ್ಯಾಸಗಳನ್ನು ಕುರಿತು ಗಂಭೀರವಾಗಿ ಯೋಚಿಸುವಂತೆ ಮಾಡುತ್ತವೆ. ಗಂಭೀರ ನಾಟಕವು ನಾಟಕಕಾರನ ಚಿಂತನೆ, ಬಾಳಿನ ದರ್ಶನ ಇವನ್ನು ನಿರೂಪಿಸುತ್ತದೆ. ಇದೇ ಅದರ ಬೆನ್ನುಮೂಳೆ. ಇದಿಲ್ಲವಾದರೆ ಕೃತಿ ಗಂಭೀರ ನಾಟಕವಾಗದೆ ಕರುಣಾಜನಕ ದೃಶ್ಯದ ನಿರೂಪಣೆಯಷ್ಟೇ ಆಗುತ್ತದೆ.

ಪ್ರೊಫೆಸರ್ ಎಸ್. ವಿ. ರಂಗಣ್ಣನವರು ಹೇಳುವಂತೆ, "ಪಲವು ರಾಗಗಳನ್ನು ಉದ್ರೇಕಗೊಳಿಸಿ ಹೊರಗೆಳೆದು ತನ್ಮೂಲಕ ಅವನ್ನು ಶಮನ ಮಾಡಿ, ಕೊನೆಗೆ ಚಿತ್ತಸ್ಥೈರ್ಯ, ಸಮಾಧಾನದ ಪ್ರಶಾಂತ ಸ್ಥಿತಿಗೆ ಬರುವಂತೆ ಮಾಡುವುದೇ ಗಂಭೀರ ನಾಟಕದ ಮಹೋಪಕಾರ." ಕನ್ನಡದಲ್ಲಿ ಇಂತಹ ಮೊದಲನೆಯ ಸ್ವತಂತ್ರ ಗಂಭೀರ ನಾಟಕ 'ಅಶ್ವತ್ಥಾಮನ್'. ಮುಂದಿನ ಶಿಷ್ಟ ನಾಟಕದ ಮೇಲೆ ಇದು ವಿಶೇಷ ಪ್ರಭಾವವನ್ನು ಬೀರಿತು.

'ಇಂಗ್ಲಿಷ್ ಗೀತಗಳ'ಲ್ಲಿ 'ಶ್ರೀ' ಅವರು ಇಂಗ್ಲಿಷಿನಿಂದ ಕನ್ನಡಕ್ಕೆ ತಂದುಕೊಟ್ಟ ಕವನಗಳಿವೆ. 'ಹೊಂಗನಸು'ಗಳಲ್ಲಿ ಅವರು ವಿವಿಧ ಸಂದರ್ಭಗಳಲ್ಲಿ ಬರೆದ ಕವನಗಳಿವೆ. 'ಶ್ರೀ' ಅವರ ಸ್ವತಂತ್ರ ಕವಿಪ್ರತಿಭೆಯನ್ನು ಮೆರೆಯುವ ಕೆಲವು ಕವನಗಳು ಇಲ್ಲಿವೆ. ಇಂತಹ ಒಂದು ಕವನ 'ಕನ್ನಡ ತಾಯ ನೋಟ'. ಇದು ವಿಜಯನಗರ ಸಾಮ್ರಾಜ್ಯದ ಆರು ನೂರು ವರ್ಷಗಳ ಸ್ಮರಣೆಗಾಗಿ ನಡೆದ ಸಂಭ್ರಮದ ಉತ್ಸವದ ಸಮಯದಲ್ಲಿ ಬರೆದದ್ದು. ಕವನದ ಗಂಭೀರ ನಡಿಗೆ, ಪಂಕ್ತಿಗಳ ಬಿಗಿಯಾದ ಬಂಧ, ಪ್ರಾರಂಭದಿಂದ ಒಂದು ಗಂಭೀರವಾದ ಸನ್ನಿವೇಶದ ನಿರೂಪಣೆಗೆ ನಮ್ಮನ್ನು ಸಿದ್ಧಗೊಳಿಸುತ್ತವೆ. ಕವನವನ್ನು 'ಶ್ರೀ' ಅವರು ಆರು ಭಾಗಗಳಾಗಿ ವಿಂಗಡಿಸಿದ್ದರೂ ಅದು ಮೂರು ಭಾಗಗಳಲ್ಲಿ ಬೆಳೆಯುತ್ತದೆ. ಮೊದಲನೆಯದು ಕನ್ನಡ ನಾಡಿನ ದರ್ಶನ. ಎರಡನೆಯದು ಕನ್ನಡ ತಾಯ ದರ್ಶನ. ಮೂರನೆಯದು ಕನ್ನಡ ನಾಡಿನ ಉಜ್ವಲ ಭವಿಷ್ಯದ ದರ್ಶನ. ಕನ್ನಡ ನಾಡಿನ ವರ್ಣನೆ ಸುಂದರವಾಗಿದೆ. ಇಲ್ಲಿ ಪಂಕ್ತಿಗಳ ನಡಿಗೆ, ಲಯ, ಮಾತುಗಳ ಜೋಡಣೆ, ಅವು ಕಣ್ಣಿನ ಮೂಲಕ, ಕಿವಿಯ ಮೂಲಕ ಮನಸ್ಸಿನಲ್ಲಿ ಜೋಡಿಸುವ ಪ್ರತಿಮಾವಳಿ ಎಲ್ಲ ಸೇರಿ ಕನ್ನಡ ನಾಡಿನ ಭವ್ಯ ಚಿತ್ರ ಮೂಡುತ್ತದೆ. ಈ ಭಾಗದ ಕೆಲವು ಪಂಕ್ತಿಗಳು :

**ಕಡೆದ ನೊರೆ, ಚಿಗಿವ ನೊರೆ, ತೂರುನೊರೆ, ಕುದಿವ ನೊರೆ,**
**ಬೆಳ್ಪಿನೊಳ್ ಬೆಳ್ಪು !**
**ಆ ಬೆಳ್ಪು, ಆ ತೆಳ್ಪು, ಆ ಮೆಲ್ಪು – ನಿನ್ನ ಮಕ್ಕಳ ಬಾಳಿನೊಳ್ಪು !**
**ನೀರ್‌ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳ್ಪು !**

ಕನ್ನಡ ನಾಡನ್ನು ಸುತ್ತುತ್ತ ಅದರ ಚೆಲುವಿನಿಂದ ಸಂತಸಪಡುತ್ತಿರುವಾಗ

ಕವಿ ಕನ್ನಡ ತಾಯನ್ನು ಕಾಣುತ್ತಾರೆ. ಆಕೆ ಯಾರೆಂದು ತಿಳಿಯದೆ ಆಕೆಯನ್ನು ಮಾತನಾಡಿಸುತ್ತಾರೆ. ಆಕೆಯು ತಾನೊಬ್ಬ ಹಳೆಯ ಮುತ್ತೈದೆ ಎಂದು ಹೇಳಿ ತನ್ನ ಮಕ್ಕಳು ಪೆರರ ಸೇವೆಯಲ್ಲಿ ಸಂಭ್ರಮಪಡುತ್ತಿದ್ದಾರೆ, ತನ್ನನ್ನು ಮರೆತಿದ್ದಾರೆ, ತನ್ನ ಮನೆ ಹಾಳು, ತನ್ನ ನುಡಿ ಬೀಳು ಎಂದು ದುಃಖಿಸುತ್ತಾಳೆ. ಕವಿಗೆ ಆಕೆ ಕನ್ನಡ ತಾಯಿ ಎಂದು ಅರಿವಾಗುತ್ತದೆ. ಇನ್ನು ಕನ್ನಡ ಜನ ತಮ್ಮನ್ನು ತಿದ್ದಿಕೊಳ್ಳುತ್ತಾರೆ,

ಬೇಡಮ್ಮ ಮಕ್ಕಳಲಿ ಇನಿಸೊಂದು ಕಡು ಮುನಿಸು – ಬಾರಮ್ಮ
ಹರಸು,
ನಿನ್ನ ನಾಡಿನೊಳದಕೊ ಬೆಳಕು ಮೂಡಿಹುದು – ಜೀವ
ಕೂಡಿಹುದು,

ಕನ್ನಡಿಗರು ಸಿಂಹದಂತೆದ್ದು, 'ತಾಯ್ ಬದುಕಿ, ತಾವ್ ಬದುಕಿ, ಪೆರರ ಬದುಕಿಪರು' ಎಂದು ಕವಿ ಆಕೆಗೆ ಆಶ್ವಾಸನೆ ನೀಡುತ್ತಾರೆ. 'ಬಾ ತಾಯಿ ಹರಸು, ತೇರೇರು ಬಾ ತಾಯಿ, ನಿನ್ನ ಸಿಂಹಾಸನವನೇರು ಮತ್ತೆ' ಎಂದು ಬೇಡುತ್ತಾರೆ.

ಮುದುಕಿ ಎಳೆಯುವಳಾಗಿ, ಮಾಸು ಮಿಂಚೆಳೆಯಾಗಿ, ಸವೆದ
ಮೈ ತುಂಬಿ,
ಕಡಲ ತೆರೆಗಳನುಟ್ಟು, ಬೆಟ್ಟಬಯಲಸು ತೊಟ್ಟು, ಅರಿಲ
ಮುಡಿಗಿಟ್ಟು

ಕನ್ನಡ ತಾಯಿ ರಥವನ್ನೇರುತ್ತಾಳೆ.

'ಶ್ರೀ' ಅವರ ಶ್ರೇಷ್ಠ ಕವನ 'ಶುಕ್ರಗೀತೆ'. ಇದರಲ್ಲಿ ಮೂಡುವ ದರ್ಶನವನ್ನು ಆಗಲೆ ವಿವರಿಸಿದೆ. ಜಗತ್ತಿನ ಸೃಷ್ಟಿಯನ್ನು ಕವನ ಭವ್ಯವಾಗಿ ಚಿತ್ರಿಸುತ್ತದೆ.

ಮೊತ್ತಮೊದಲ್ ಬೆಳಕಾಗಲೆಂದಾಗ ಬೆಳಕಾಯ್ತು, ಬೆಳಕು
ಚೆಲುವಾಯ್ತು,
ಕಿಡಿ ಸಿಡಿದು ಮಿಸುಗಿದವು ಜ್ಯೋತಿಗಳ್, ಮೂಡಿದರು
ಸೂರ್ಯಚಂದಿರರು
ಲೋಕಚಕ್ಷುಗಳೆನಿಸಿ, ಸತ್ಯಧರ್ಮಗಳಂತೆ, ಕ್ಷಮೆದಯೆಗಳಂತೆ.

ದಿವಿಜರು, ಋಷಿಗಳು ನಲಿದರು. ಆದರೆ ಅಂದೇ ಪ್ರಾರಂಭವಾಯಿತು ಬೆಳಕಿನ ದೂತರಿಗೂ ಕತ್ತಲೆಯ ಸಂತಾನಕ್ಕೂ ಹೋರಾಟ. ಈ ಹೋರಾಟ ಇಂದೂ ನಡೆಯುತ್ತಲೇ ಇದೆ. ಮನುಷ್ಯನ ಹೃದಯದಲ್ಲಿ ನಿರಂತರವಾಗಿ ನಡೆದಿದೆ. ಬೆಳಕಿನ ಮಕ್ಕಳು ಮನುಷ್ಯನಿಗಾಗಿ ಪ್ರಾರ್ಥನೆ ಸಲ್ಲಿಸುತ್ತಾರೆ. ಅವನಿಗೆ ದಾರಿದೀಪಗಳಾಗಿದ್ದಾರೆ. ಇದು ಕವನದ ಸಾರಾಂಶ. ಕವನವು ಜಗತ್ತಿನ ಸೃಷ್ಟಿಯ ದಿನದಿಂದ ಪ್ರಾರಂಭಿಸಿ, ಮನುಷ್ಯನ ಚರಿತ್ರೆಯನ್ನು ನಿರೂಪಿಸುತ್ತದೆ. ನಾವು ಮರ್ತ್ಯಲೋಕದಿಂದ ಬಹು ಎತ್ತರದಲ್ಲಿ ನಿಂತು ಯುಗಯುಗಗಳಲ್ಲಿ ಸಾಗುವ ಮಾನವಕುಲದ ಮಹಾಯಾತ್ರೆಯನ್ನು ವೀಕ್ಷಿಸುವ ಅನುಭವ ಆಗುತ್ತದೆ.

**ನಾಟಕಗಳು**

'ಶ್ರೀ' ಅವರು ಮೂರು ನಾಟಕಗಳನ್ನು ಬರೆದರು. 'ಗದಾಯುದ್ಧ ನಾಟಕಂ', ರನ್ನನ ಚಂಪೂ ಕಾವ್ಯ 'ಸಾಹಸಭೀಮ ವಿಜಯ'ದಿಂದ ಹೊರ ತೆಗೆದು ಕಡೆದಿಟ್ಟ ಕೃತಿ. ಬಹುಮಟ್ಟಿಗೆ 'ಶ್ರೀ' ಅವರು ರನ್ನನ ಮಾತುಗಳನ್ನೆ ಬಳಸಿದ್ದಾರೆ. ಆದರೆ ನಾಟಕಕ್ಕೆ ಅಗತ್ಯವಾದ ಪರಿಣಾಮದ ಐಕ್ಯತೆ ಮೂಡುವಂತೆ ಎಚ್ಚರಿಕೆ ವಹಿಸಿದ್ದಾರೆ. ದುರ್ಯೋಧನನ ವಿಷಯದಲ್ಲಿ ರನ್ನನಿಗಿರುವ ಅನುಕಂಪ ಇಲ್ಲಿ ಇನ್ನೂ ಸ್ಫುಟವಾಗುತ್ತದೆ. 'ಪಾರಸಿಕರು' ಎನ್ನುವುದು ಕ್ರಿ.ಪೂ. ಐದನೆಯ ಶತಮಾನದ ಗ್ರೀಕ್ ನಾಟಕಕಾರ ಈಸ್ಕಿಲಸನ ಒಂದು ನಾಟಕದ ಅನುವಾದ. ಅವರ ಶ್ರೇಷ್ಠ ನಾಟಕ 'ಅಶ್ವತ್ಥಾಮನ್'. ಈಸ್ಕಿಲಸನ ಸಮಕಾಲೀನ ಸಫೋಕ್ಲಿಸನು ಬರೆದ ಒಂದು ನಾಟಕದ ಆಧಾರದ ಮೇಲೆ ರಚಿತವಾದದ್ದು. ಆದರೆ ಗ್ರೀಕ್ ನಾಟಕದ ಪರಿಚಯವೇ ಇಲ್ಲದೆ ಓದಿ ಆನಂದಿಸಬಹುದಾದ ಕೃತಿ 'ಅಶ್ವತ್ಥಾಮನ್'. ಮಹಾಭಾರತದ ಸೌಪ್ತಿಕ ಪರ್ವದಲ್ಲಿ ಬರುವ ಪ್ರಸಂಗ ಈ ನಾಟಕದ ಮೂಲವಸ್ತು. ಮರಣದ ಹೊಸ್ತಿಲಲ್ಲಿರುವ ದುರ್ಯೋಧನನಿಗೆ ಅಶ್ವತ್ಥಾಮನು ಪಾಂಡವರನ್ನು ಕೊಲ್ಲುವುದಾಗಿ ಮಾತು ಕೊಡುತ್ತಾನೆ. ಕೃಷ್ಣನ ರಕ್ಷೆಯಿಂದ ಪಾಂಡವರು ಉಳಿದುಕೊಳ್ಳುತ್ತಾರೆ. ಅವರ ಮಕ್ಕಳಾದ ಉಪಪಾಂಡವರೂ ಉಳಿದವ ರೆಲ್ಲರೂ ನಡುರಾತ್ರಿ ಮಲಗಿದ್ದಾಗ ಅಶ್ವತ್ಥಾಮನ ಕತ್ತಿಗೆ ಬಲಿಯಾಗುತ್ತಾರೆ.

ಪಾಂಡವರು ಅಶ್ವತ್ಥಾಮನನ್ನು ಬೆನ್ನಟ್ಟುತ್ತಾರೆ. ಅವನು ಪ್ರಯೋಗಿಸಿದ ದಿವ್ಯಾಸ್ತ್ರವನ್ನು ಕೃಷ್ಣ ಶಮನಗೊಳಿಸುತ್ತಾನೆ. ಅಶ್ವತ್ಥಾಮನ ಹಣೆಯಲ್ಲಿನ ದಿವ್ಯರತ್ನವನ್ನು ಕಿತ್ತುಕೊಂಡು ಪಾಂಡವರು ದ್ರೌಪದಿಗೆ ಕೊಡುತ್ತಾರೆ. ಮೂರು ಸಾವಿರ ವರ್ಷಕಾಲ ಏಕಾಂಗಿಯಾಗಿ ಅಲೆಯುವುದೇ ಅಶ್ವತ್ಥಾಮನಿಗೆ ಶಿಕ್ಷೆ. 'ಶ್ರೀ'ಯವರ ನಾಟಕದಲ್ಲಿ ರುದ್ರನನ್ನು ಧಿಕ್ಕರಿಸಿದ ನಾಯಕನ ಅಹಂಕಾರದಿಂದ ಅವನ ಮನಸ್ಸಿಗೆ ಕತ್ತಲೆ ಕವಿಯುತ್ತದೆ. ತನ್ನ ಘೋರ ಕಾರ್ಯದ ಅರಿವಾದಾಗ ಅವನು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಅವನೊಬ್ಬ ಅಸಾಧಾರಣ ಪುರುಷ. ಅವನನ್ನು ನಾಶಪಡಿಸುವ ರುದ್ರನೇ ಕೃಷ್ಣನನ್ನು "ಆರಿರ್ದ್ದರ್ ಈತನಿನ್ ಜ್ಞಾನಿಯುಂ ಶೂರನುಂ? ಬಲ್ಲಿದನ್ ಆರಾನುಮನ್?" ಎಂದು ಮೆಚ್ಚಿಕೆಯಿಂದ ಕೇಳುತ್ತಾನೆ. ಅದರೆ ತನ್ನ ಉನ್ಮತ್ತತೆಯಿಂದ ದೈವಬಲವನ್ನು ಕಡೆಗಣಿಸಿ ಅಶ್ವತ್ಥಾಮ ಸಂಕಟವನ್ನು ತಂದುಕೊಳ್ಳುತ್ತಾನೆ. ನಮ್ಮ ಕಣ್ಣೆದುರಿಗೇ ಪರ್ವತವೊಂದು ತತ್ತರಿಸಿ ಕುಸಿದಂತೆ ಭಾಸವಾಗುತ್ತದೆ.

## ಕನ್ನಡ ಸಾಹಿತ್ಯವನ್ನು ಕುರಿತು

ಕನ್ನಡಿಗರಿಗೆ ಸಾಹಿತ್ಯದ ವಿಷಯವನ್ನೂ ತಮ್ಮ ಭಾಷೆ ಮತ್ತು ಸಾಹಿತ್ಯಗಳ ವಿಷಯವನ್ನೂ ತಿಳಿಸಿಕೊಡುವ ಬರಹ ಬೆಳೆಯಬೇಕೆಂದು ಬಯಸುತ್ತಿದ್ದ ಶ್ರೀಕಂಠಯ್ಯನವರು ತಾವೇ ಈ ವಿಷಯಗಳನ್ನು ಕುರಿತು ಕನ್ನಡದಲ್ಲಿಯೂ ಇಂಗ್ಲಿಷಿನಲ್ಲಿಯೂ ಮಾತನಾಡಿದರು, ಬರೆದರು. 'ಕನ್ನಡ ಮಾತು ತಲೆ ಯೆತ್ತುವ ಬಗೆ', 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಮೊದಲಾದ ಶೀರ್ಷಿಕೆ ಗಳಲ್ಲಿ ಅವರ ಉಪನ್ಯಾಸಗಳು ಪ್ರಕಟವಾಗಿವೆ. ಹಲವು ಭಾಷಣಗಳಲ್ಲಿ ಅವರು ಕನ್ನಡ ನಾಡಿನ ಸ್ಥಿತಿ, ಕನ್ನಡ ಭಾಷೆ ಮತ್ತು ಸಾಹಿತ್ಯಗಳನ್ನು ಬೆಳೆಸಲು ಅಗತ್ಯ ವಾದ ವಾತಾವರಣ, ಕಾರ್ಯಕ್ರಮಗಳು ಇವನ್ನು ವಿವರಿಸಿದರು. ಐವತ್ತು-ಅರವತ್ತು ವರ್ಷಗಳನಂತರವೂ ಇವುಗಳಿಂದ ನಾವು ತಿಳಿಯಬೇಕಾದದ್ದು ವಿಪುಲವಾಗಿದೆ ಎನ್ನುವುದೇ ಶ್ರೀಕಂಠಯ್ಯನವರ ವಿದ್ವತ್ತು, ಚಿಂತನೆಗಳ ಹಿರಿಮೆಗೆ ಸಾಕ್ಷಿ. ಅವರು ಹಲವು ಕೃತಿಗಳಿಗೆ ಬರೆದ ಮುನ್ನುಡಿಗಳಲ್ಲಿ ರನ್ನ, ಕುಮಾರವ್ಯಾಸ, ನಾಗಚಂದ್ರ ಮೊದಲಾದ ಹಿಂದಿನ ಕವಿಗಳ ಸಾಧನೆಯನ್ನು

ಪರಿಚಯ ಮಾಡಿಕೊಟ್ಟರು. ಅವರದು, ತಾವು ಮೆಚ್ಚಿದುದನ್ನು ಇತರ ರೊಂದಿಗೆ ಹಂಚಿಕೊಳ್ಳುವ ವಿಮರ್ಶೆ. ಕುಂದುಕೊರತೆಗಳನ್ನು ಗುರುತಿಸಲು ಶಕ್ತಿ ಇರಲಿಲ್ಲ ಅಥವಾ ಹೇಳಲು ಮನಸ್ಸಿರಲಿಲ್ಲ ಎಂದಲ್ಲ, ಅಲ್ಲಲ್ಲಿ ದೋಷಗಳನ್ನು ಎತ್ತಿ ತೋರಿಸುತ್ತಾರೆ. ಆದರೆ, ತನ್ನ ಮೈಯ ಕಂಪನ್ನು ಅರಿಯದೆ ಅವನ್ನು ಹೊರಗೆ ಹುಡುಕುವ ಕಸ್ತೂರಿಮೃಗದಂತೆ ಕನ್ನಡಿಗರು ತಮ್ಮ ಸಾಹಿತ್ಯ ಸಂಸ್ಕೃತಿಗಳ ಹಿರಿಮೆಯನ್ನೆ ತಿಳಿಯದೆ 'ಹೆರರ ನಡೆ ಹೆರರ ನುಡಿ, ಹೆರರ ಕೂಗೇ ಕೂಗು, ಹೆರರದೇ ಹೆಮ್ಮೆ'ಯ ಸ್ಥಿತಿಯಲ್ಲಿದ್ದಾಗ ಹಿಂದಿನ ಕನ್ನಡ ಸಾಹಿತ್ಯದ ಹಿರಿಮೆಯನ್ನು ತೋರಿಸಿಕೊಡುವುದೇ ಮುಖ್ಯ ಎಂದು 'ಶ್ರೀ' ಅವರಿಗನ್ನಿಸಿರ ಬೇಕು. ಒಮ್ಮೊಮ್ಮೆ ಅವರ ವಿಮರ್ಶೆ ಉದ್ಗಾರಗಳ ಸರಮಾಲೆಯಾಗುವುದೂ ಉಂಟು. ಆದರೆ 'ಸಂಸ್ಕೃತ ನಾಟಕ' ಗ್ರಂಥಕ್ಕೆ ಅವರು ಬರೆದ ಮುನ್ನುಡಿ ಯಂತಹ ಬರಹ ಅವರ ವಿದ್ವತ್ತು ಮತ್ತು ಸಾಹಿತ್ಯಾಸಕ್ತಿಯ ವ್ಯಾಪ್ತಿಗೆ ಸಾಕ್ಷಿ. 'ಕನ್ನಡ ಸಾಹಿತ್ಯದ ಚರಿತ್ರೆ'ಯನ್ನು ಬರೆದು ಅಗತ್ಯವಾಗಿ ಆಗಬೇಕಾಗಿದ್ದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟರು. 'ವಿದ್ಯಾರ್ಥಿಗಳ ಪ್ರಥಮ ಪರಿಚಯಕ್ಕಾಗಿ', 'ಒಟ್ಟಿನ ಮೇಲೆ ಕನ್ನಡ ಸಾಹಿತ್ಯದ ಬೆಳವಣಿಗೆ, ವಿಭಾಗ ಗಳು, ಸ್ವರೂಪ, ಯೋಗ್ಯತೆ ಇವುಗಳನ್ನು ಸ್ಪಷ್ಟಪಡಿಸಬೇಕೆಂದು ಪ್ರಯತ್ನ ಪಟ್ಟಿರುತ್ತದೆ' ಎಂದು ಅವರೇ ತಮ್ಮ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ. ಅವರು ಪ್ರಾರಂಭಿಸಿದ 'ಕನ್ನಡ ಛಂದಸ್ಸಿನ ಚರಿತ್ರೆ' ಅಪೂರ್ಣವಾಗಿಯೆ ಉಳಿಯಿತು.

— ೪ —

**ಕನ್ನಡ ತಾಯಿ ಬಾಳಲಿ**

ಕನ್ನಡಕ್ಕೆ 'ಶ್ರೀ' ಅವರು ಆಧಾರವಾದರು. 'ಶ್ರೀ' ಅವರನ್ನು ಕನ್ನಡ ಉಳಿಸಿತು. ತಮ್ಮ ವೈಯಕ್ತಿಕ ಜೀವನದ ನೋವು, ಕೊರಗುಗಳನ್ನು ಮೀರಿ ಒಂದು ಮಹತ್ಕಾರ್ಯಕ್ಕೆ ತಮ್ಮನ್ನು ಅರ್ಪಿಸಿಕೊಂಡು 'ಶ್ರೀ' ಅವರು ಬದುಕನ್ನು ಸಾರ್ಥಕ ಮಾಡಿಕೊಂಡರು. ಅವರು ತೀರಿಕೊಳ್ಳುವುದಕ್ಕೆ ನಾಲ್ಕೈದು ದಿನಗಳ ಮೊದಲು ಬರೆದ 'ಹರಕೆ'ಯ ಕೆಲವು ಸಾಲುಗಳು ಇವು :

ಕನ್ನಡನುಡಿಪಯಿರ್ ಮುನ್ನಡೆ ತೆನೆ ತುಂಬಿ,
ಪೊನ್ನಡಕಿಲ್ಗಂ ಪೊನ್ನಕ್ಕೆ.

ಬರೆವರ ಬಾಯೊಳೊಲವಿರ್ಕೆ, ಚೆಲುವಿರ್ಕೆ
ನಲವಿರ್ಕೆ, ನಾಡ ಗೆಲವಿರ್ಕೆ.

ಧರ್ಮದ ತಿರುಳಿರ್ಕೆ, ಕರ್ಮದ ಕೆಚ್ಚಿರ್ಕೆ,
ಪೆರ್ಮೆ, ಬಿಗಿ, ನಗೆ, ಸೊಗಸು.

ಕನ್ನಡ ಕಣ್ಮಣಿಗಳ್ ಪೆಣ್ಮಣಿಗಳ್ ಕಟ್ಟಾಳ್ಗಳ್
ಚೆನ್ನನೆಯು ಬಾಳ್ಗೆ ಬೆಳಕಕ್ಕೆ.

ಕನ್ನಡ ತಾಯ್ ವಾಳ್ಗೆ, ವಾಳ್ಗೆ, ಚೆಂದವಿಳುಂ,
ಕೂಡಿದೀ ಚೆನ್ನೈಮಾನಾಡು.

# ಪ್ರತಿಷ್ಠಾನದ ಪ್ರಕಟನೆಗಳು

1. ಕೀರ್ತನ ಕುಸುಮಾಂಜಲಿ 10–00
2. ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ) 50–00
3. ಬೇಂದ್ರೆಸ್ಮೃತಿ (ಸಾಹಿತ್ಯಭಂಡಾರದಲ್ಲಿ ದೊರೆಯುತ್ತದೆ) 5–00
4. ಸರ್ವಜ್ಞ ವಚನಗಳು 15–00
5. ಸೂತ ಭಾರತ 15–00
6. ಧ್ರುವ ಚರಿತ್ರೆ 15–00
7. ಹಸ್ತಪ್ರತಿ ಶಾಸ್ತ್ರ 15–00
8. ಶ್ರೀ ಕೃಷ್ಣದೇವರಾಯನ ದಿನಚರಿ 10–00
9. ಮೂರು ದತ್ತಿ ಉಪನ್ಯಾಸಗಳು 10–00
10. ಲೋಚನ (ಷಾಣ್ಮಾಸಿಕ ವಿದ್ವತ್ ಪತ್ರಿಕೆ) ವಾರ್ಷಿಕ ಚಂದಾ 6–00

## ಸಿದ್ಧತೆಯಲ್ಲಿ

1. ತಿಮ್ಮಪ್ಪದಾಸರ '**ಶ್ರೀ ಕೃಷ್ಣಬಾಲಲೀಲೆ**'

## ಇತರ ಕೃತಿಗಳು

1. **ಅಧ್ಯಯನ** (ಡಾ॥ ಶಂ. ಬಾ. ಜೋಶಿ ಅಭಿನಂದನ ಗ್ರಂಥ : ಅಭಿನಂದನ ಸಮಿತಿಯ ಕೊಡುಗೆ) 50–00
2. **ಪ್ರೊ॥ ಎಂ. ವಿ. ಸೀ. ಅವರ ಪುಸ್ತಕಗಳು** (ರಾಘವ ಪ್ರಕಾಶನದ ಕೊಡುಗೆ) (ಸೆಟ್ಟಿಗೆ) 25–00
3. **ಕವಿ ಜಿಹ್ವಾಬಂಧನ** (ಶ್ರೀಮತಿ ಕೆ. ಶಾಂತಾ ಅವರ ಕೊಡುಗೆ) 2–00
4. ಷೇಕ್ಸ್‌ಪಿಯರನ '**ಹನ್ನೆರಡನೆಯ ರಾತ್ರಿ**' (ಡಾ॥ ಪಿ. ವಿ. ನಾರಾಯಣ ಅವರ ಕೊಡುಗೆ) 6–00

# ಆಚಾರ್ಯ ಬಿ. ಎಂ. ಶ್ರೀ.

೧೯೮೮–೮೫ ಆಚಾರ್ಯ ಬಿ. ಎಂ. ಶ್ರೀ. ಅವರ ಜನ್ಮಶತಮಾನೋತ್ಸವ ವರ್ಷ. ೩–೧–೧೮೮೪ರಲ್ಲಿ ಸಂಪಿಗೆಯಲ್ಲಿ ಜನಿಸಿದ ಶ್ರೀಯವರ ಊರು ಬೆಳ್ಳೂರು. ಬಾಲ್ಯ ಶ್ರೀರಂಗಪಟ್ಟಣದಲ್ಲಿ. ಅಲ್ಲಿಯೇ ಪ್ರಾರಂಭದ ವಿದ್ಯಾಭ್ಯಾಸ; ಮೈಸೂರು, ಬೆಂಗಳೂರುಗಳಲ್ಲಿ ಪ್ರೌಢವಿದ್ಯಾಭ್ಯಾಸ; ಮದರಾಸಿನಲ್ಲಿ ಎಂ. ಎ. ಮತ್ತು ಬಿ. ಎಲ್. ಮಾಡಿಕೊಂಡು ಮೈಸೂರಿನಲ್ಲಿ ಇಂಗ್ಲಿಷ್ ಅಧ್ಯಾಪಕರಾದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರೊಫೆಸರಾಗಿ, ಗೌರವ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಅಲ್ಲಿ ರಿಜಿಸ್ಟ್ರಾರ್ ಆಗಿದ್ದಾಗ ಮೊತ್ತಮೊದಲ ಬಾರಿಗೆ ಕನ್ನಡ ಎಂ. ಎ. ತರಗತಿ ಪ್ರಾರಂಭವಾಯಿತು. ಗುಲ್ಬರ್ಗ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದು, ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ, ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ, ಕನ್ನಡ ನಾಡು ನುಡಿಯ ಏಳ್ಗೆಗೆ ಜೀವನವನ್ನು ಮುಡಿಪಿಟ್ಟರು. ನಾಡಿನಲ್ಲೆಲ್ಲಾ ಸಂಚರಿಸಿ ಹರಿದು ಹಂಚಿಹೋಗಿದ್ದ ಕನ್ನಡನಾಡನ್ನು ಒಂದಾಗಿಸಲು ಇಂಗ್ಲಿಷ್ ಪ್ರಾಬಲ್ಯದಿಂದ ಅಸಡ್ಡೆಗೆ ಈಡಾಗಿದ್ದ ಕನ್ನಡ ಭಾಷೆಯನ್ನು ಮೇಲೆತ್ತಲು ಕಂಕಣಬದ್ಧರಾಗಿದ್ದ ಶ್ರೀಯವರು 'ಕನ್ನಡದ ಕಣ್ವ'ರೆನಿಸಿದರು. 'ಇಂಗ್ಲಿಷ್ ಗೀತ'ಗಳನ್ನು ರಚಿಸಿ ಕನ್ನಡ ಕವಿಕುಲಗುರುವಾಗಿ, 'ಶ್ರೀ' ಎಂದು ಪ್ರಸಿದ್ಧರಾದರು. ಮಹಾರಾಜರವರಿಂದ 'ರಾಜಸೇವಾಸಕ್ತ' ಎಂಬ ಬಿರುದು ಪಡೆದರು. 'ಅಶ್ವತ್ಥಾಮನ್', 'ಪಾರಸಿಕರು', 'ಗದಾಯುದ್ಧ' ನಾಟಕಗಳನ್ನು ಬರೆದು ಪಾಶ್ಚಾತ್ಯ ದುರಂತ ನಾಟಕ ಕಲ್ಪನೆಯನ್ನು ಮೊತ್ತಮೊದಲಿಗೆ ಕನ್ನಡಕ್ಕೆ ತಂದರು. ಇಂಥ ಸಾಹಿತ್ಯ ಯುಗಪ್ರವರ್ತಕರನ್ನು ನೆನೆಯುವುದು ನಮ್ಮೆಲ್ಲರ ಆದ್ಯಕರ್ತವ್ಯ.

ಅವರ ನೆನಪನ್ನು ನಂದಾದೀವಿಗೆಯಾಗಿ ಬೆಳಗ ಹೊರಟಿರುವ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಕನ್ನಡಿಗರೆಲ್ಲರ ಸಹಾಯ, ಸಹಕಾರಗಳು ಅತ್ಯಗತ್ಯ.